**The Karnataka Scout and Guide**

June-July 1996
Vol. 80 No. 3-4



## CONTENTS



**FRONT PAGE PHOTO**

Camp for Disabled Children alorg with normal Guides held from 12 to 16-2-1996 at the State Girl Guide Head Quarters, Shanthigruha Children learningknots.

**ಮುಖಪುಟದ ಚಿತ್ರ**

ದಿನಾಂಕ 12 ರಿಂದ 16-2-1996 ರ ವರೆಗೆ ಗರ್ಲ್‌ಗೈಡ್ ಹೆಡ್‌ಕ್ವಾರ್ಟರ್ಸ್, ಶಾಂತಿಗೃಹದಲ್ಲಿ ನಡೆದ ಅಂಗವಿಕಲ ಮಕ್ಕಳ ವಿಶೇಷ ಗೈಡ್ ಶಿಬಿರದ ಒಂದು ದೃಶ್ಯ.
ಮಕ್ಕಳು ಗಂಟುಗಳನ್ನು ಕಲಿಯುತ್ತಿರುವುದು.

## ಕೊಂಡಜ್ಜಿ ಬ. ಷಣ್ಮುಖಪ್ಪ
ರಾಜ್ಯ ಮುಖ್ಯ ಆಯುಕ್ತರು

**ಆತ್ಮೀಯ ಬಂಧುಗಳೇ,**

ರಾಜ್ಯದಾದ್ಯಂತ ತಾಲ್ಲೂಕು – ಜಿಲ್ಲಾ ಸಂಸ್ಥೆಗಳು ಮತ್ತು ರಾಜ್ಯ ಸಂಸ್ಥೆಯ ನೆರವು – ಸಹಕಾರದಿಂದ ಕಳೆದ ವರ್ಷ ಸ್ಕೌಟ್-ಗೈಡ್ ಚಟುವಟಿಕೆಗಳು, ತರಬೇತಿ ಶಿಬಿರಗಳು, ಕಾರ್ಯಕ್ರಮಗಳು ಯಶಸ್ವಿಯಾಗಿ ನಡೆದ ಬಗ್ಗೆ ವರದಿಗಳು ರಾಜ್ಯ ಸಂಸ್ಥೆಗೆ ಬರುತ್ತಲೇ ಇವೆ. ಈ ವರ್ಷದಲ್ಲಿಯೂ ಎಲ್ಲಾ ಹಂತಗಳಲ್ಲೂ ವಿವಿಧ ಕಾರ್ಯ ಚಟುವಟಿಕೆಗಳನ್ನು ಹಮ್ಮಿಕೊಂಡಿರುವ ಬಗ್ಗೆ ವಿವರಗಳು ಈಗಾಗಲೇ ಬಂದಿವೆ.

ನಿಮ್ಮಗಳ ಉತ್ಸಾಹ, ಕಾರ್ಯತತ್ಪರತೆ, ಅರ್ಪಣಾಮನೋಭಾವವನ್ನು ನೋಡಿದಾಗ ನನಗಂತೂ ಅತ್ಯಂತ ಹೆಮ್ಮೆ ಮತ್ತು ಅಭಿಮಾನವುಂಟಾಗುತ್ತದೆ. ತಾವುಗಳು ತಮ್ಮ ಕಾರ್ಯಕ್ರಮಗಳು, ಚಟುವಟಿಕೆಗಳನ್ನು ಯಶಸ್ವಿಯಾಗಿ ಮುನ್ನಡೆಸುವುದರಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಳ್ಳುತ್ತೀರಿ ಎಂಬ ವಿಶ್ವಾಸ ನನಗಿದೆ. ಇತ್ತೀಚೆಗೆ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರು ಹೊರಡಿಸಿರುವ ಆದೇಶ, ಪಂಚಾಯತ್ ರಾಜ್ ಇಲಾಖೆ ನೀಡಿರುವ ಸುತ್ತೋಲೆ ಮತ್ತು ಸಂಸ್ಥೆಯವರು ನೀಡುತ್ತಿರುವ ಉತ್ತೇಜನ – ರಾಜ್ಯಾದ್ಯಂತ ಎಲ್ಲಾ ಹಂತಗಳಲ್ಲಿಯೂ ಸಂಸ್ಥೆಯ ಕಾರ್ಯಕ್ರಮ ಮತ್ತು ಚಟುವಟಿಕೆಗಳನ್ನು ಮುನ್ನಡೆಸುವುದರಲ್ಲಿ ಪದಾಧಿಕಾರಿಗಳು, ಕಾರ್ಯಕರ್ತರು, ಸಂಘಟನಾ ಆಯುಕ್ತರುಗಳು, ತರಬೇತಿ ನಾಯಕರುಗಳು ತೋರಿಸುತ್ತಿರುವ ಅದಮ್ಯ ಉತ್ಸಾಹ, ನಮ್ಮ ಚಳುವಳಿಯನ್ನು ಕರ್ನಾಟಕದ ಉದ್ದಗಲಕ್ಕೂ ಯಶಸ್ವಿಯಾಗಿ ಬೆಳೆಸುವುದರಲ್ಲಿ ನನಗೆ ಯಾವುದೇ ಅನುಮಾನವಿಲ್ಲ

ಸಂಸ್ಥೆಯ ಎಲ್ಲಾ ಘಟಕಗಳೂ ತಮ್ಮ ವಾರ್ಷಿಕ ಕಾರ್ಯಕ್ರಮಗಳ ವೇಳಾಪಟ್ಟಿಯಂತೆ ತಮ್ಮ ತಮ್ಮ ವಿಭಾಗಗಳಲ್ಲಿ ಸ್ಕೌಟ್–ಗೈಡ್ ದಳಗಳನ್ನು ನೋಂದಾಯಿಸುವುದು, ಶಾಲೆಯ ಉಪಾಧ್ಯಾಯರುಗಳಿಗೆ ಮೂಲ ತರಬೇತಿ ಶಿಬಿರಗಳನ್ನು ಏರ್ಪಡಿಸಿ ಅವರುಗಳು ತಮ್ಮ ಶಾಲೆಯಲ್ಲಿ ದಳಗಳನ್ನು ಪ್ರಾರಂಭಿಸುವಂತೆ ಅವರುಗಳನ್ನು ಪ್ರಚೋದಿಸಿ, ಅವರುಗಳು ಸದಾ ಸ್ಕೌಟ್–ಗೈಡ್ ಆಗಿಯೇ ಉಳಿದು ಸಂಸ್ಥೆಗೆ, ಶಾಲೆಗೆ, ಸಮಾಜಕ್ಕೆ ಮತ್ತು ಯುವ ಜನಾಂಗಕ್ಕೆ ಉತ್ತಮ ಆದರ್ಶಗಳನ್ನು ನೀಡಲು ಕಂಕಣಬದ್ಧರಾಗುವಂತೆ ಮಾಡುವುದು ನಮ್ಮಗಳೆಲ್ಲರ ಆದ್ಯ ಕರ್ತವ್ಯ ಮತ್ತು ಜವಾಬ್ದಾರಿ. ಇದರೊಂದಿಗೆ ಶಾಲೆಯ ಮುಖ್ಯೋಪಾಧ್ಯಾಯರು, ಪ್ರಾಂಶುಪಾಲರು, ಶಿಕ್ಷಣ ಇಲಾಖೆಯ ಎಲ್ಲ ಹಂತದ ಅಧಿಕಾರಿಗಳಿಗೆ ನಮ್ಮ ಚಳುವಳಿಯ ಬಗ್ಗೆ ವಿವರಗಳನ್ನು ತಿಳಿಸಿಕೊಡುವ " ಒಂದು ದಿವಸದ ಮಾಹಿತಿ ಶಿಬಿರವನ್ನು " ಏರ್ಪಡಿಸುವುದು ಅತ್ಯಂತ ಅವಶ್ಯಕ. ಈ ಕೆಲಸಗಳ ಬಗ್ಗೆ ತಾವೆಲ್ಲರೂ ಒಟ್ಟುಗೂಡಿ ಚಿಂತಿಸಿ, ಕಾರ್ಯಪ್ರವೃತ್ತರಾಗಬೇಕು ಎಂದು ನನ್ನ ಪ್ರಾರ್ಥನೆ. ಈ ಚಳುವಳಿ ಅತ್ಯಂತ ಬಲಿಷ್ಠ ಚಳುವಳಿಯಾಗಿ ಬೆಳೆಯಲು ಮೇಲ್ಕಂಡ ಸಲಹೆಗಳನ್ನು ತಾವುಗಳು ಕಾಯಾ, ವಾಚಾ, ಮನಸಾ ಪ್ರಯತ್ನಪಟ್ಟು ಮುಂದಿನ ಮಾರ್ಚ್ – ಏಪ್ರಿಲ್ 97ಕ್ಕೆ ದಳಗಳ ನೋಂದಣಿಯ ಸಂಖ್ಯೆ, ಸ್ಕೌಟ್ಸ್ – ಗೈಡ್ಸ್‌ಗಳ ಸಂಖ್ಯೆ ಈಗಿನ ಸಂಖ್ಯೆಯು ಎರಡು–ಮೂರು ಪಟ್ಟು ಬೆಳೆಯಲು ರಾಜ್ಯ ಸಂಸ್ಥೆಯೊಂದಿಗೆ ಸಹಕರಿಸಬೇಕು ಎಂದು ತಮ್ಮಗಳಲ್ಲಿ ವಿನಂತಿಸುತ್ತೇನೆ.

ಜೂನ್ 96ರಲ್ಲಿ ನಮ್ಮ ಸಂಸ್ಥೆಯ ಇಬ್ಬರು ಹಿರಿಯ ನಾಯಕರು ನಮ್ಮನ್ನಗಲಿದ್ದಾರೆ. ಇದು ನಮ್ಮ ಸಂಸ್ಥೆಗೆ ಆಗಿರುವ ತುಂಬಲಾರದ ನಷ್ಟ. ಅನುಪಮ ಸಜ್ಜನರೂ, ಸರಳರೂ, ವಿದ್ಯಾಕ್ಷೇತ್ರದಲ್ಲಿ ಸೇವೆಗೈದ ರಾಜ್ಯ ಸ್ಕೌಟ್ ಆಯುಕ್ತರಾದ ರೈ|| ರೆ|| ಡಾ|| ಸಿ. ಡಿ. ಜತ್ತನ್ನ ಅವರು ಸ್ವಲ್ಪ ಕಾಲದಿಂದ ಅನಾರೋಗ್ಯದಿಂದ ಇದ್ದಾಗ್ಯೂ, ಸಂಸ್ಥೆಯ ಮತ್ತು ಶಾಂತಿಗೃಹದ ಬೆಳವಣಿಗೆ ಮತ್ತು ಅಭಿವೃದ್ಧಿಯಲ್ಲಿ ತಮ್ಮ ಅಮೂಲ್ಯ ಕೊಡುಗೆಯನ್ನು ನೀಡಿದ್ದನ್ನು ನಾವಾರೂ ಮರೆಯುವಂತಿಲ್ಲ. ಇವರು ದಿನಾಂಕ 23-6-96 ರಂದು ಮಂಗಳೂರಿನಲ್ಲಿ ನಿಧನ ಹೊಂದಿದರು. ಅವರಿಗೆ 68

ವರ್ಷ ವಯಸ್ಸಾಗಿತ್ತು. ಪತ್ನಿ ಶ್ರೀಮತಿ ಸರೋಜ ಜತ್ತನ್ನ, ಮಗ ಡಾ॥ ಸುಶೀಲ್ ಮತ್ತು ಮಗಳನ್ನು ಹಿಂದೆ ಬಿಟ್ಟು ಅಗಲಿದ್ದಾರೆ.

ಮತ್ತೊಬ್ಬ ಹಿರಿಯ ನಾಯಕ ತುಮಕೂರಿನ ನಮ್ಮೆಲ್ಲರ ಹಿರಿಯಣ್ಣ – ಸ್ಕೌಟರ್, ರೊಟೇರಿಯನ್, ಕ್ರೀಡಾ ನಾಯಕ – ವಿದ್ಯಾಕ್ಷೇತ್ರದಲ್ಲಿ ಅವಿರತ 5 ದಶಕಗಳ ಕಾಲ ಹೆಚ್ಚಿನ ಸೇವೆ ಸಲ್ಲಿಸಿದ ಶ್ರೀಯುತ ಕೆ. ಎಸ್. ಶಂಕರ್ ಇನ್ನಿಲ್ಲ ಎಂದು ನಂಬುವುದಕ್ಕಾಗದು. ಆದರೂ ದೈವ ನಿಯಮದಂತೆ ಶ್ರೀ ಶಂಕರ್ ಜೂನ್ 10, 1996 ರಂದು ವಿಧಿವಶರಾದರು. ಅವರಿಗೆ 76 ವರ್ಷಗಳಾಗಿದ್ದವು. ಅವರ ಅಂತಿಮ ಯಾತ್ರೆಯಲ್ಲಿ ನಾನು ಮತ್ತು ಹಿರಿಯ ರಾಷ್ಟ್ರೀಯ ನಾಯಕರಾದ ಶ್ರೀ ವಿ. ಪಿ. ದೀನದಯಾಳುನಾಯ್ಡು ಮತ್ತು ಸಂಸ್ಥೆಯ ಇತರರುಗಳು ಭಾಗವಹಿಸಿ, ರಾಜ್ಯ ಸಂಸ್ಥೆಯ ಪರವಾಗಿ ನಮ್ಮ ನಮನಗಳನ್ನು ಸಲ್ಲಿಸಿದ್ದೇವೆ. ತುಮಕೂರಿನ ನಾಗರಿಕರು ಅವರಿಗೆ ತೋರಿಸಿದ ಗೌರವ–ಅಭಿಮಾನಗಳು ನಮಗೆಲ್ಲಾ ಹೆಮ್ಮೆಯ ವಿಷಯ. ಅವರ ನಿಧನದಿಂದ ತುಮಕೂರಿನ ಸರ್ವೋದಯ ವಿದ್ಯಾ ಸಂಸ್ಥೆ, ಸ್ಕೌಟ್ ಮತ್ತು ಇತರೆ ಸಾಮಾಜಿಕ ಚಟುವಟಿಕೆಗೆ ಅತ್ಯಂತ ದುಃಖ ಉಂಟಾಗಿದೆ.

ಇವರಿಬ್ಬರ ಕುಟುಂಬ ವರ್ಗಗಳಿಗೂ, ಸಂಬಂಧಪಟ್ಟ ಸಂಘ ಸಂಸ್ಥೆಗಳಿಗೂ ನಮ್ಮ ಸಂಸ್ಥೆಗೂ ತುಂಬಲಾರದ ನಷ್ಟವಾಗಿದೆ. ಭಗವಂತನು ಅವರುಗಳ ಆತ್ಮಗಳಿಗೆ ಶಾಂತಿ ನೀಡಲಿ ಮತ್ತು ಅವರ ಆತ್ಮೀಯ ಬಂಧುಗಳಿಗೆ ಈ ದುಃಖವನ್ನು ಭರಿಸುವ ಶಕ್ತಿ ಕೊಡಲಿ ಎಂದು ಪ್ರಾರ್ಥಿಸುತ್ತೇನೆ.

ಜುಲೈ 8 ರಿಂದ 13 ರವರೆಗೆ ನಾರ್ವೆಯ ರಾಜಧಾನಿ ಓಸ್ಲೋನಲ್ಲಿ ನೆರವೇರಿದ 34ನೇ ಅಂತರರಾಷ್ಟ್ರೀಯ ಸ್ಕೌಟ್ ಸಮ್ಮೇಳನದಲ್ಲಿ ನಮ್ಮ ರಾಷ್ಟ್ರದ ಪರವಾಗಿ ನಮ್ಮ ರಾಜ್ಯದ, ಕೋಶಾಧಿಕಾರಿ ಶ್ರೀ ಎಂ. ಎ. ಖಾಲಿದ್ ಮತ್ತು ದಕ್ಷಿಣ ಕನ್ನಡ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಐ. ಎ. ಕೈರನ್ನ ಭಾಗವಹಿಸಿದ್ದರು. ನಮ್ಮ ರಾಷ್ಟ್ರದಿಂದ 13 ಪ್ರತಿನಿಧಿಗಳು ಭಾಗವಹಿಸಿದ್ದರು. ತಂಡದ ನೇತೃತ್ವವನ್ನು ರಾಷ್ಟ್ರೀಯ ಆಯುಕ್ತ ಶ್ರೀ ಎಲ್. ಎಂ. ಜೈನ್ ವಹಿಸಿದ್ದರು. ತಮ್ಮೆಲ್ಲರ ಪರವಾಗಿ ಇವರುಗಳಿಗೆ ನಮ್ಮ ಅಭಿನಂದನೆಗಳು.

ಪ್ರಸ್ತುತ ವರ್ಷದಲ್ಲಿ ನಾವುಗಳು ಹಮ್ಮಿಕೊಂಡಿರುವ ಪ್ರತಿಯೊಂದು ಕಾರ್ಯಕ್ರಮವೂ ಯಶಸ್ವಿಯಾಗಿ ನೆರವೇರಲು ಭಗವಂತನ ಕೃಪೆ – ಲಾರ್ಡ್ ಮತ್ತು ಲೇಡಿ ಬೇಡನ್ ಪೊವೆಲ್‌ರವರ ಅಭಯ ಹಸ್ತ ಮತ್ತು ಸಮಾಜ – ಸರ್ಕಾರ – ಸಾರ್ವಜನಿಕರ ಒತ್ತಾಸೆ – ಅಭಿಮಾನಗಳು ನಮಗೆ ಸದಾ ಶ್ರೀರಕ್ಷೆಯಾಗಲಿ ಎಂದು ಆಶಿಸುತ್ತೇನೆ.

ತಮ್ಮ ವಿಶ್ವಾಸಿ

[signature]

Be a brick in the wall
And player in God's team.

ಭಾವಾರ್ಥ :

ಗೋಡೆಯೊಳಗಿನ ಇಟ್ಟಿಗೆಯಂತೆ, ಸಮಾಜದಲ್ಲಿ ಒಂದಾಗಿ ದೇವರು ನಮಗೆ ವಿಧಿಸಿರುವ ಪಾತ್ರವನ್ನು ನಿರ್ವಹಿಸಬೇಕು.

— ಬೇಡನ್ ಪೋವೆಲ್

## ಶ್ರದ್ಧಾಂಜಲಿ

# ರೈ॥ ರೆ॥ ಡಾ॥ ಸಿ. ಡಿ. ಜತ್ತನ್ನ

### ರಾಜ್ಯ ಸ್ಕೌಟ್ ಆಯುಕ್ತರು

ರಾಜ್ಯ ಆಯುಕ್ತರು (ಸ್ಕೌಟ್ಸ್) ಆಗಿದ್ದ ರೈ॥ ರೆ॥ ಡಾ॥ ಸಿ. ಡಿ. ಜತ್ತನ್ನರವರು, ಸರಳ ವ್ಯಕ್ತಿಗಳೂ, ಪ್ರಾಮಾಣಿಕರೂ, ನಿಷ್ಠರೂ ಆಗಿದ್ದರು. ಧರ್ಮ ಬೋಧಕರು ಮಾತ್ರವಲ್ಲದೆ, ಧರ್ಮನಿರತರಾಗಿ ಅನುಕರಣೀಯ ವ್ಯಕ್ತಿಯಾಗಿದ್ದರು.



1976ರಲ್ಲಿ ದ. ಕ. ಜಿಲ್ಲೆಯ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಆಗಿ ನೇಮಕಗೊಂಡ ಇವರು ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲೂ ಸಂಚರಿಸಿ, ಸ್ಥಳೀಯ ಸಂಸ್ಥೆಗಳನ್ನು ಸಂಘಟಿಸಿದರಲ್ಲದೆ, ಜಿಲ್ಲೆಯು ಆರ್ಥಿಕವಾಗಿ, ಭದ್ರ ಬುನಾದಿಯ ಮೇಲೆ ನಿಲ್ಲುವಂತೆ ಮಾಡಿದರು. ಏಳು ವರ್ಷಗಳ ಅವಧಿಯಲ್ಲಿ ಸಂಸ್ಥೆಯ ಸದಸ್ಯತ್ವವನ್ನು ದ್ವಿಗುಣಗೊಳಿಸಿದರು.

1983ರಲ್ಲಿ ಚರ್ಚ್ ಆಫ್ ಸೌತ್ ಇಂಡಿಯಾದ ಕರ್ನಾಟಕ ಕೇಂದ್ರ ಡಯೋಸೀಸ್‌ನ ಬಿಷಪ್ ಆಗಿ ಕಾರ್ಯ ವಹಿಸಿದ ಸಂದರ್ಭದಲ್ಲಿ, ನಮ್ಮ ಸಂಸ್ಥೆಯಲ್ಲಿ ಅವರನ್ನು ಸಹಾಯಕ ರಾಜ್ಯ ಆಯುಕ್ತರು (ಸ್ಕೌಟ್ಸ್) ಆಗಿ ನೇಮಕ ಮಾಡಲಾಯಿತು.

ಆ ಅವಧಿಯಲ್ಲಿ ಅವರು ತಮ್ಮ ಅಪೂರ್ವವೆನಿಸಿದ "ಡ್ಯೂಡ್ರಾಪ್ಸ್" ಯೋಜನೆಯ ಮೂಲಕ ರಾಜ್ಯ ಸಂಸ್ಥೆಯ ಬೊಕ್ಕಸವನ್ನು ತುಂಬಿಸಿ, ಆರ್ಥಿಕವಾಗಿ ನೆಲೆನಿಲ್ಲುವಂತೆ ಮಾಡಿದರು. ಶಾಂತಿಗೃಹ ಶಿಬಿರ ಕೇಂದ್ರದ ಅಭಿವೃದ್ಧಿಯ ಬಗ್ಗೆ ಸಹ ಕಾಳಜಿ ವಹಿಸಿ, ಆರ್ಥಿಕವಾಗಿ ಒತ್ತಾಸೆಯನ್ನು ಒದಗಿಸಿದರು. ರಾಜ್ಯ ಆಯುಕ್ತರಾಗಿದ್ದ ಅವಧಿಯಲ್ಲಿ ಇವರು ರಾಜ್ಯದ ಮೂಲೆಮೂಲೆಗಳಲ್ಲಿ ಸಂಚರಿಸಿ, ರಾಜ್ಯಮಟ್ಟದ ಎಲ್ಲಾ ಸಂಘಟನೆಗಳಲ್ಲಿಯೂ ಭಾಗವಹಿಸಿ, ಸಂಸ್ಥೆಯ ಏಳಿಗೆಗೆ ಕಾರಣರಾದರು.

ಇವರ ನಿಸ್ಪೃಹ ಸೇವೆಯನ್ನು ಮೆಚ್ಚಿ 1990ರಲ್ಲಿ ರಾಜ್ಯ ಸಂಸ್ಥೆಯವರು "ಮೆಡಲ್ ಆಫ್ ಮೆರಿಟ್" ಪ್ರಶಸ್ತಿಯನ್ನು ನೀಡಿದರು.

ಕರ್ನಾಟಕ ಸರ್ಕಾರದವರು ಅವರ ಸಮಾಜ ಸೇವೆಯನ್ನು ಮೆಚ್ಚಿ 1991ರಲ್ಲಿ "ರಾಜ್ಯೋತ್ಸವ ಪ್ರಶಸ್ತಿ" ಯನ್ನು ನೀಡಿದರು.

7-11-92 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಅತ್ಯುಚ್ಚ ಪ್ರಶಸ್ತಿಯಾದ "ಬೆಳ್ಳಿ ಆನೆ" ಯನ್ನು ರಾಷ್ಟ್ರಪತಿಗಳು ಇವರಿಗೆ ನೀಡಿ ಗೌರವಿಸಿದರು.

23-6-96 ರಂದು ಶ್ರೀ ಜತ್ತನ್ನರವರ ದಿವ್ಯ ಆತ್ಮವು ಭಗವಂತನನ್ನು ಸೇರಿತು.

ಮೃತರ ಆತ್ಮಕ್ಕೆ ಶಾಂತಿಯನ್ನು ಕೋರುತ್ತೇವೆ.

## ಶ್ರೀ ಕೆ. ಎಸ್. ಶಂಕರ್ ಎಲ್. ಟಿ. (ಸ್ಕೌಟ್ಸ್)

### ಮಾಜಿ ತರಬೇತಿ ಆಯುಕ್ತರು

ಇತ್ತೀಚಿನ ವರ್ಷಗಳಲ್ಲಿ "ತುಮಕೂರಿನಲ್ಲಿ ಸ್ಕೌಟಿಂಗ್" ಎಂದೊಡನೆ ಸೋದರ ಶಂಕರ್‌ರವರ ಚಿತ್ರ ಕ್ಷಣ ಮುಂದೆ ನಿಲ್ಲುತ್ತಿತ್ತು, ಅಷ್ಟು ನಂಟು ಬೆಳೆದಿತ್ತು. ಸುಮಾರು 5 ದಶಕಗಳ ದೀರ್ಘಸೇವೆಯ ಫಲವದು.



1920ರಲ್ಲಿ ಕುಣಿಗಲ್ ಶಿವರಾಮಯ್ಯನವರ ಮೊದಲ ಮಗನಾಗಿ ಹುಟ್ಟಿದ ಶ್ರೀ ಶಂಕರ್‌ರವರು ಬಾಲ್ಯದಲ್ಲಿ ಸ್ಕೌಟ್ ಆಗಿದ್ದರು. ಮುಂದೆ ಸ್ಕೌಟ್ ಮಾಸ್ಟರ್ ಶಿಕ್ಷಣ ಪಡೆದು 1948-49 ರಲ್ಲಿ ಮತ್ತೆ ಸಂಸ್ಥೆಯಲ್ಲಿ ಕಾಲಿಟ್ಟರು. ಅಲ್ಲಿಂದ ಬೆಳೆಯುತ್ತಲೇ ಬಂದ ಅವರು ಜಿಲ್ಲಾ ಸಂಸ್ಥೆಯ ಸಹಕಾರ್ಯದರ್ಶಿಯಾಗಿ, ಕಾರ್ಯದರ್ಶಿಯಾಗಿ, ಜಿಲ್ಲಾ ಕಮೀಷನರಾಗಿ, ರಾಜ್ಯ ತರಬೇತಿ ತಂಡದ ಸದಸ್ಯರಾಗಿ (ಲೀಡರ್ ಟ್ರೈನರ್), ರಾಜ್ಯ ತರಬೇತಿ ಆಯುಕ್ತರಾಗಿ, ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ, ಭಾರತ್ ಸ್ಕೌಟ್ಸ್ ಗೈಡ್ಸ್ ಸಂಸ್ಥೆಯಲ್ಲಿ ತಮ್ಮದೇ ಆದ ವಿಶಿಷ್ಠ ಸ್ಥಾನವನ್ನು ಗಳಿಸಿಕೊಂಡಿದ್ದರು. ಹತ್ತಾರು ಪ್ರೆಸಿಡೆಂಟ್ ಸ್ಕೌಟ್‌ಗಳನ್ನು ತಯಾರಿಸಿದ, ನಾಲ್ಕಾರು ಬಾಲಕ, ಬಾಲಕಿಯರನ್ನು ಅಂತರ ರಾಷ್ಟ್ರೀಯ ಸ್ಕೌಟ್ ಗೈಡ್ ಸಮಾವೇಶಗಳಿಗೆ ಕಳುಹಿಸಿದ, ತಾವೂ ಭಾಗವಹಿಸಿದ ಕೀರ್ತಿ ಇವರದು. ಬಾಲಕರೆಂದರೆ, ಅವರ ಚಟುವಟಿಕೆಗಳೆಂದರೆ ಇವರಿಗೆ ಬಹಳ ಕಳಕಳಿ. ಉತ್ತಮ ಶಿಕ್ಷಕರೆಂದೇ ಬಾಲಸಮೂಹದಲ್ಲಿ ಖ್ಯಾತಿ ಪಡೆದಿದ್ದರು. ವಿಶಿಷ್ಠ ರೀತಿಯಲ್ಲಿ ಶಿಕ್ಷಣ ನೀಡಲು ತುಮಕೂರಿನಲ್ಲಿ ಶ್ರೀ ಸರ್ವೋದಯ ವಿದ್ಯಾ ಸಂಸ್ಥೆ, ಬಾಲಕಿಯರಿಗಾಗಿ ಶ್ರೀ ಸೋಮೇಶ್ವರ ಪ್ರೌಢಶಾಲೆ, ಸಹ ಶಿಕ್ಷಣ ಸಂಸ್ಥೆಯಾದ ಸರ್ವೋದಯ ಜೂನಿಯರ್ ಕಾಲೇಜು ಇವುಗಳನ್ನು ಸ್ಥಾಪಿಸಿದರು. ಅನೇಕ ಕ್ರೀಡಾ ಸಂಸ್ಥೆಗಳು, ಸೇಂಟ್‌ಜಾನ್ ಆಂಬುಲೆನ್ಸ್, ರೋಟರಿ ಸಂಸ್ಥೆಗಳಲ್ಲಿ ಜಿಲ್ಲಾ ಮಟ್ಟದಲ್ಲಿ ಅಧಿಕಾರದಲ್ಲಿದ್ದರು. ಪ್ರಖ್ಯಾತರಾಗಿದ್ದರು. ಜಿಲ್ಲೆಯ ಹೋಂಗಾರ್ಡ್ಸ್‌ ಕಮಾಂಡೆಂಟ್ ಆಗಿ ಹೆಸರು ಗಳಿಸಿದ್ದರು. ಬಡ ವಿದ್ಯಾರ್ಥಿಗಳಿಗೆ "ವಿದ್ಯಾದಾನ" ಮಾಡುವ ಉದ್ದೇಶದಿಂದ ಇವರು ನಡೆಸಿದ ಸ್ಟೂಡೆಂಟ್ಸ್ ಎಯ್ಡ್ ಸೊಸೈಟಿ, ಮುಂದೆ ನಿಂತು ನಡೆಸಿ ಜನಪ್ರಿಯವಾಗಿದ್ದ "ಉದಯ ಕಲಾವಿದರು" ಹೆಸರಿನ ಹವ್ಯಾಸಿ ನಾಟಕ ಸಂಸ್ಥೆ ಇತ್ಯಾದಿ ಇವರ ಪ್ರತಿಭೆಯ ಪ್ರತೀಕಗಳು ಬರೆಯುತ್ತಿದ್ದರೆ ಪಟ್ಟಿ ಬೆಳೆಯುತ್ತಲೇ ಹೋದೀತು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ಇವರಿಗೆ ರಾಷ್ಟ್ರಮಟ್ಟದಲ್ಲಿ "ರಜತ ತಾರೆ" ಯನ್ನು ನೀಡಿ ಗೌರವಿಸಿದ್ದಿತು. ಬಹುಮುಖ ವ್ಯಕ್ತಿತ್ವದ ಈ ಮಾನವರು ಅಪಾರವಾದ ಅಭಿಮಾನೀ ಬಳಗವನ್ನೂ, ಬಂಧುಬಾಂಧವರನ್ನೂ ಅಗಲಿ, 10-6-96 ರಂದು ತಮ್ಮ ಅಂತಿಮ ಪ್ರಯಾಣ ಮಾಡಿದರು. ತುಮಕೂರಿನ ಸ್ಕೌಟ್ ಗೈಡ್ ಚರಿತ್ರೆಯಲ್ಲಿ 5 ದಶಕಗಳ ಕಾಲ ಬೆಳಗಿದ ಈ ಜ್ಯೋತಿಯು ಅಂದು ನಂದಿಹೋಯಿತು.

## ಶ್ರೀ ವೆಂಕಯ್ಯ ಪಾಟೀಲ

### ಮಾಜಿ ಸ॥ ಸಂಘಟನಾ ಆಯುಕ್ತರು (ಸ್ಕೌಟ್ಸ್)

ಗುಲ್ಬರ್ಗಾ ಜಿಲ್ಲೆಯ ಸ್ಕೌಟಿಂಗ್‌ಗೂ ಶ್ರೀ ವೆಂಕಯ್ಯ ಪಾಟೀಲರಿಗೂ ಒಂದು ರೀತಿಯ ಸಂಬಂಧವಿದ್ದಿತು. 1938ರಷ್ಟು ಹಿಂದೆಯೇ ಗುಲ್ಬರ್ಗದ ಸರ್ಕಾರಿ ಕಾಲೇಜಿನ ಮಿಡಲ್ ಸ್ಕೂಲ್‌ನಲ್ಲಿ ಮೊದಲ ಸ್ಕೌಟ್ ದಳವನ್ನು ಸ್ಥಾಪಿಸಿದ ಹೆಗ್ಗಳಿಕೆ ಇವರದು. 1915 ರಲ್ಲಿ ಜನಿಸಿದ ಇವರು 1936ರಲ್ಲಿ ಅದಿಲಾಬಾದ್ ಜಿಲ್ಲೆಯ ನಿರ್ಮಲ್‌ನ ಪ್ರೌಢಶಾಲೆಯ ಹೈಸ್ಕೂಲ್‌ನಲ್ಲಿ ದೈಹಿಕ ಶಿಕ್ಷಣ ಅಧ್ಯಾಪಕರಾಗಿ ನಿಜಾಂ ಸರ್ಕಾರದಲ್ಲಿ ಸೇವೆಯನ್ನು ಪ್ರಾರಂಭಿಸಿದರು. 1938ರಲ್ಲಿ ಸ್ಕೌಟ್ ಮಾಸ್ಟರ್ ಶಿಕ್ಷಣ ಪಡೆದು ಗುಲ್ಬರ್ಗದಲ್ಲಿ ಸ್ಕೌಟ್‌ದಳವನ್ನು ಪ್ರಾರಂಭಿಸಿದರು. ಸ್ಕೌಟ್ ಮತ್ತು ರೋವರ್

ವಿಭಾಗಗಳಲ್ಲಿ ವುಡ್ ಬ್ಯಾಡ್ಜ್ ಪಡೆದಿದ್ದು, ಕಬ್ ವಿಭಾಗದಲ್ಲಿ ಭಾಗ–2 ಮುಗಿಸಿದ್ದರು. ಗುಲ್ಬರ್ಗದ ಜಗತ್, ಹಿರೇಮಲೆಕುಂದ, ಮೋಮಿನ್‌ಪುರಗಳಲ್ಲಿಯೂ, ಕರೀಂನಗರ್‌ನ ಆಸಿಫ್‌ಗಂಜ್ ಗಳಲ್ಲಿಯೂ, ಜಗತಲ್‌ನಲ್ಲಿಯೂ, ಉಸ್ಮಾನಾಬಾದ್ ಜಿಲ್ಲೆಯ ಲಾಟೂರ್ ಮತ್ತು ಉಸ್ಮಾನಬಾದ್ ಶಾಲಾ ಕಾಲೇಜುಗಳಲ್ಲಿ ದಳಗಳನ್ನು ನಡೆಸಿದರು. ಗುಲ್ಬರ್ಗದ ಮೂರೂ ಕಡೆಗಳಲ್ಲಿ ಮುಖ್ಯೋಪಾಧ್ಯಾಯರಾಗಿದ್ದಾಗ್ಯೂ ಸ್ಕೌಟ್ ಮಾಸ್ಟರಾಗಿದ್ದರು. ಕಮೀಷನರ್ ಶಿಕ್ಷಣವನ್ನು 1965ರಲ್ಲಿ ಪಡೆದರು. 1961–64ರ ವರೆಗೆ ಸಾ॥ ಸಂಘಟನಾ ಆಯುಕ್ತರಾಗಿ ಗುಲ್ಬರ್ಗ ವಿಭಾಗದಲ್ಲಿ ಕೆಲಸ ಮಾಡಿದರು. ಉತ್ತಮ ಸ್ಕೌಟ್ ದಳಗಳನ್ನು ನಡೆಸಿ ಖ್ಯಾತಿ ಪಡೆದ ಇವರು ಅನೇಕ ಪ್ರಶಸ್ತಿಗಳನ್ನು ಪಡೆದಿದ್ದರು. ಇವರು ಸಲ್ಲಿಸಿದ ನಿಸ್ಪೃಹ ಸೇವೆ ಮತ್ತು ಇವರ ನಿಷ್ಕಪಟ ವ್ಯಕ್ತಿತ್ವವು, ಇವರನ್ನು ಜನಾನುರಾಗಿಗಳನ್ನಾಗಿಸಿದ್ದಿತು. 1973–74 ರಲ್ಲಿ "ಉತ್ತಮ ಶಿಕ್ಷಕ" ಪ್ರಶಸ್ತಿಗಾಗಿ ಇವರ ಹೆಸರು ನೋಂದಾಯಿತವಾಗಿದ್ದಿತು. ಶ್ರೀಯುತರು ತಮ್ಮ 81ನೆಯ ವಯಸ್ಸಿನಲ್ಲಿ 6-6-96 ರಂದು ದೈವಾಧೀನರಾದರು.



ಮಾಜಿ ಮಂತ್ರಿಗಳಾಗಿದ್ದ ಶ್ರೀ ವೀರಶೆಟ್ಟಿ ಕುಶನೂರ್ ರವರು 22-7-96 ರಂದು, ಮೈಸೂರು ಗ್ರಾಮಾಂತರ ಜಿಲ್ಲೆಯ ಕೋಶಾಧಿಕಾರಿ ಶ್ರೀ ಮಲ್ಲರಾಜ ಅರಸ್ ರವರು 29-4-1995 ರಂದು ಚಿತ್ರದುರ್ಗದ ಅಡ್ವೊಕೇಟ್ ಶ್ರೀ ಡಿ. ಯಂ. ರುದ್ರಯ್ಯನವರು 28-5-96ರಂದು, ಬೆಳ್ತಂಗಡಿ ಸ್ಥಳೀಯ ಸಂಸ್ಥೆಯ ಅಧ್ಯಕ್ಷ ಶ್ರೀ ಡಾ॥ ಉಮಾನಾಥ್ ಪ್ರಭು ರವರು 28-6-96 ರಂದು, ಬಿಜಾಪುರದ ಮಾಜಿ ಜಿಲ್ಲಾ ಕಾರ್ಯದರ್ಶಿ ಶ್ರೀ ಗುಡಿರವರು 12-6-96ರಂದು, ನಿಧನರಾದ ಬಗ್ಗೆ ವರದಿಗಳು ಬಂದಿದ್ದು, ಅವರ ಕುಟುಂಬ ವರ್ಗಕ್ಕೆ ನಾವು ಸಂತಾಪ ಸೂಚಿಸುತ್ತೇವೆ.

ಸ್ಕೌಟ್ ಬಾಂಧವರ ಪರವಾಗಿ ಮೃತರುಗಳ ಆತ್ಮಕ್ಕೆ ಶಾಂತಿಯನ್ನು ಕೋರುತ್ತೇವೆ. ಮೃತರುಗಳ ಕುಟುಂಬಕ್ಕೆ ದುಃಖವನ್ನು ಭರಿಸುವ ಶಕ್ತಿಯನ್ನು ನೀಡಲೆಂದು ಭಗವಂತನನ್ನು ಪ್ರಾರ್ಥಿಸುತ್ತೇವೆ.



## CONDOLENCE MEETING

A Condolence Meeting to condole the sad demise of Rt. Rev. Dr. C. D. Jathanna, State Commissioner (Scouts), Bharat Scouts and Guides Karnataka, who passed away on Sunday, the 23rd June 1996 at Mangalore, and Sri K. S. Shankar, LT (S) and former State Training Commissioner (S), Bharat Scouts and Guides Karnataka, who passed away on Monday, the 10th June at Tumkur, and all others referred above was held on Friday, the 28th June 1996 at State Headquarters, Prof. P Shivashankar Circle, Kondajji Basappa Road, Fort, Bangalore-2, at 4-30 p.m. Sri V. P Deenadayalu Naidu, Former National Commissioner, Bharat Scouts and Guides, India, presided.

Sri K. B. Shanmukhappa, Major M. R Narayan Singh, Smt. Lalitha Krishnaswamy, T S. Lucas, Major T. K. Nagambal, Prof. M. S. Appa, spoke on the occasion and eulcgised the services rendered to the Bharat Scouts & Guides by Dr. C. D Jathanna and Sri K. S. Shankar and prayed for peace to the departed souls. A minutes silence was observed.

## DEPUTATION TO INTERNATIONAL EVENTS 1996



Kum. Anupama C. of St. Paul's English High School, J. P. Nagar, Bangalore North District, was selected by the National Headquarters, New Delhi to attend the International Event. "EDINBURGH 96" held at Netherurd, Blyth Bridge, West, Linton Peebleshire, EH 46, 7AQ, from 27-7-96 to 3-8-96.

She left Bangalore on 21st July 96 and has since returned. we like to share her experiences.

**The following Districts organised the District level Testing Camps for the prospective Rajyapuraskar Guides during the month of July 1996.**

| Sl. No. | District | Date | Total No. to attend | Incharge |
|---|---|---|---|---|
| 1. | Bangalore North | 19th & 20th July 1996 | 173 | Smt. Shantha Giriyanna LT (G) |
| 2. | Bangalore South & B'lore Rural | 26th & 27th July 96 | 95<br>16 | Smt. Ravi Wesley LT (G) |
| 3. | Bijapur | 20-7-1996 | 25 | Smt. P. C. Mangalore LT (G) |
| 4. | Chikmagalur | 13-7-1996 | 18 | Smt. N. H. Kamalakshamma LT (G) |
| 5. | Raichur | 20-7-1996 | 8 | Smt. Saroja P LT (G) |
| 6. | Dakshina Kannada | 13, 14th, 15th July 1996 | 329 | Sr. Benvita ALT (G) |
| 7. | Hassan | 20-7-1996 | 59 | Sr. Cynthia LT (G) |
| 8. | Shimoga | 21-7-1996 | 58 | Smt. N. H. Kamalakshamma LT (G) |
| 9. | Bidar | 30-7-1996 | 3 | Smt. Nirmala Kalasetty ALT (B) |
| 10. | Davanagere | 27-7-1996 | 77 | |
| 11. | Mysore City | 27-7-1996 | 39 | Smt. Shantha Giriyanna LT (G) |
| 12. | Kodagu | 27-7-1996 | 5 | Smt. K. C. Premalatha ALT (G) |

### Badge work Camp for Guides

1. **Bijapur** : District has organised this camp at S. C. P. Junior College, Mahalingpur, Bijapur from 16th to 20th July 1996 under plan grant of Guide wing.

2. **Shimoga** : District has organised at Sahyadri College Hostel, Shimoga from 23rd to 27th July 1996.

## Rashtrapathi Scouts/Guides Appearing for C. E. T. Interview for Admission to Medical/Dental/Engineering Seats Under Scouts and Guides Quota

### CRITERIA FOR ASSESSMENT

1. Participation in International Events :
2. **National Level Events :**
   - a) National Jamboree/s
   - b) National Integration Camp/s
   - c) National Level Scout/Guide Camp
3. **State Level Events :**
   - a) State Jamborette/s
   - b) State Level Camps
4. **Service Rendered :**
   - a) State Level
   - b) District Level
   - c) Taluk Level
   - d) Unit Level
5. **District Level Participation :**
   - a) District Rally
   - b) Local Association Rally
6. **Participation in Community Development Work :**
   - a) Leprosy Awareness
   - b) Sanitation Promotion
   - c) Adult Literacy
   - d) Blood Donation/Eye Camp and Health Camps
   - e) Tree Plantation
7. Uniform and Smartness

---

ಬನ್ನಿರಿ ಸೇರಿರಿ ಭಾವುಕ ಮನುಜರೆ
ಸ್ಕೌಟ್ ಗೈಡ್ ವಿಶ್ವವ್ಯಾಪಿ ಚಳುವಳಿಗೆ ।
ಸಮವಸ್ತ್ರ ಪ್ರತಿಜ್ಞೆ ನಿಯಮ ಸ್ವೀಕರಿಸಿ
ಸಮರಸ ಜೀವನ ಪಾವನಗೊಳಿಸಿ ॥

ಬಿ. ಪಿ. ದಂಪತಿ ಜನ್ಮದಿನವೊಂದೆ
ಬಿ. ಪಿ. ಸ್ಕೌಟ್ ಗೈಡ್ ಸೂಕ್ತಿಯದೊಂದೆ ॥
ಜಗದಲಿ ಸ್ಕೌಟ್ ಗೈಡ್ ಎಲ್ಲರೂವೊಂದೆ
ಮಾನವತಾ ಚಳುವಳಿ ಇದುವೊಂದೆ ॥

—ಪ್ರೇಮಾ ಚಿ. ಮಂಗಳೂರು
ಗೈಡ್ ಕ್ಯಾಪ್ಟನ್ ಮತ್ತು ಎ.ಯಲ್.ಟಿ.

# ಬೆಂಗಳೂರಿನಲ್ಲಿ ನಡೆಯಲಿರುವ ರಾಷ್ಟ್ರೀಯ ಕ್ರೀಡಾ ಕೂಟದ " ಶುಭಕಾರಿ ಲಾಂಛನವಾದ ನಂದು " ಬಿಡುಗಡೆ ಸಮಾರಂಭ

ಬೆಂಗಳೂರಿನ ಚಿನ್ನಸ್ವಾಮಿ ಕ್ರೀಡಾಂಗಣದಲ್ಲಿ 19-5-96 ರಂದು ಸಂಭ್ರಮದ ಸಮಾರಂಭ. ಆ ದಿನ ಸಂಜೆ 6 ಗಂಟೆಗೆ ಮುಂಬರಲಿರುವ ರಾಷ್ಟ್ರೀಯ ಕ್ರೀಡಾ ಕೂಟದ "ಶುಭಕಾರಿ ಲಾಂಛನವಾದ ನಂದು" ವನ್ನು ಕರ್ನಾಟಕದ ಮಾನ್ಯ ರಾಜ್ಯಪಾಲರಾದ ಖುರ್ಷಿದ್ ಆಲಂಖಾನ್ ರವರು ಬಿಡುಗಡೆ ಮಾಡಿದರು. ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ದೇವೇಗೌಡರು ಅಧ್ಯಕ್ಷತೆ ವಹಿಸಿದ್ದರು. ಕ್ರೀಡೆಗಳು ಮತ್ತು ಯುವ ಸೇವಾ ಶಾಖಾ ಮಂತ್ರಿಗಳಾದ ಶ್ರೀ ಅಜಯ್ ಕುಮಾರ್ ಸರ್‌ನಾಯಕ್, ಕ್ರೀಡೆ ಮತ್ತು ಯುವ ಸೇವಾ ಕಮಿಷನರಾದ ಶ್ರೀ ಎಸ್. ಯನ್. ಬೋರ್‌ಕರ್, ಐ.ಪಿ.ಯಸ್. ರವರು, ಇಲಾಖೆಯ ಜಂಟಿ ನಿರ್ದೇಶಕರು, ಮತ್ತಿತರ ಅಧಿಕಾರ ವರ್ಗದವರು, ಗಣ್ಯವ್ಯಕ್ತಿಗಳು, ರಾಜ್ಯ ಕಛೇರಿಯ ಸ್ಕೌಟ್ ಗೈಡ್ ವಿಭಾಗಗಳ ಎಲ್ಲಾ ಪದಾಧಿಕಾರಿಗಳೂ, ಮಕ್ಕಳ ತಾಯಿ ತಂದೆಯರೂ ಸಮಾರಂಭದಲ್ಲಿ ಉಪಸ್ಥಿತರಿದ್ದರು.

ಸಾಮೂಹಿಕ ಪ್ರದರ್ಶನದ ಬ್ಯಾಸ್ಕೆಟ್‌ಬಾಲ್, ವಾಲಿಬಾಲ್, 200 ಮೀ. ಓಟ ಮುಂತಾದ ಅನೇಕ ಚಟುವಟಿಕೆಗಳಲ್ಲಿ ಭಾಗವಹಿಸಿದ ಸ್ಕೌಟ್ ಗೈಡ್‌ಗಳ ಚಾಕಚಕ್ಯತೆಯನ್ನು, ಪ್ರದರ್ಶನ ನೇತಾರ ಶ್ರೀ ಮಂಜುನಾಥ್ ಆದಿಯಾಗಿ ಹಾಜರಿದ್ದ ಎಲ್ಲರೂಮೆಚ್ಚಿಕೊಂಡರು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರೂ ಸಹ ಹಾಜರಿದ್ದು ಸ್ಕೌಟ್ ಗೈಡ್‌ಗಳ ಪ್ರದರ್ಶನವನ್ನು ಕೊಂಡಾಡಿದರು.

ಸಮಾರಂಭದಲ್ಲಿ ಭಾಗವಹಿಸಿದ 275 ಸ್ಕೌಟುಗಳು ಹಾಗೂ 275 ಗೈಡುಗಳಿಗೆ, ಪೂರ್ವಭಾವಿಯಾಗಿ 10 ರಿಂದ 16-5-96ರ ವರೆಗೆ ಮಲ್ಲೇಶ್ವರಂನ ಮಿಲ್ಕ್ ಕಾಲೋನಿ ಮೈದಾನದಲ್ಲೂ, 17, 18 ರಂದು ಚಿನ್ನಸ್ವಾಮಿ ಕ್ರೀಡಾಂಗಣದಲ್ಲಿಯೂ ಸಂಸಿದ್ಧತಾ ಶಿಕ್ಷಣವನ್ನು ನೀಡಲಾಯಿತು.

ಸಮಾರಂಭದ ಆವರಣದಲ್ಲಿ ಸಮವಸ್ತ್ರಧಾರಿಗಳಾಗಿ ಶ್ರೀ ರೋವರ್‌ಗಳೂ, ರೇಂಜರ್‌ಗಳೂ ಸಮುಚಿತವಾದ ಸೇವೆಯನ್ನು ಸಲ್ಲಿಸಿದರು.

ಸಹಾಯಕ ಸಂಘಟನಾ ಆಯುಕ್ತರುಗಳಾದ ಶ್ರೀಮತಿ ಎಸ್. ಜಾನಕಿ ವೇಣುಗೋಪಾಲ್ ಮತ್ತು ಶ್ರೀ ಕೆ. ಯಸ್. ಶಿವಕುಮಾರ್ ಇವರುಗಳು ಮೇ 10 ರಿಂದ ಸಮಾರಂಭವು ಮುಗಿಯುವವರೆಗೂ ಅವಿಶ್ರಾಂತವಾಗಿ ಕೆಲಸ ಮಾಡಿ ಸಮಾರಂಭದ ಯಶಸ್ಸಿಗೂ, ಸ್ಕೌಟ್ ಗೈಡುಗಳ ಕೀರ್ತಿಗೂ ಕಾರಣರಾದರು.

---

It is a man making Religion that we want,
It is a man making Theory that we want,
It is a man making Education (for all round development) that we want,

Collected by : **Yemyaycee**

# ಇತ್ತೀಚೆಗೆ ತರಬೇತಿ ತಂಡಕ್ಕೆ ಸೇರಿದ ಸದಸ್ಯರು



ಶ್ರೀ ಟಿ. ಕೆ. ನಾರಾಯಣಸ್ವಾಮಿ

ಶ್ರೀ ಟಿ. ಕೆ. ನಾರಾಯಣಸ್ವಾಮಿಯವರು, ಬೆಂಗಳೂರು ಇಂದಿರಾ ನಗರದ ನ್ಯೂ ಹೊರೈಜನ್ ಪಬ್ಲಿಕ್ ಸ್ಕೂಲ್‌ನಲ್ಲಿ ದೈಹಿಕ ಶಿಕ್ಷಣ ಬೋಧಕರೂ, ಸ್ಕೌಟ್ ಮಾಸ್ಟರೂ ಆಗಿರುತ್ತಾರೆ.

ಈಗ್ಗೆ 6 ವರ್ಷಗಳಿಂದಲೂ ಸ್ಕೌಟಿಂಗ್‌ನಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ವೈಟ್‌ಫೀಲ್ಡ್ ಸ್ಥಳೀಯ ಸಂಸ್ಥೆಯ ಕೋಶಾಧಿಕಾರಿಗಳಾಗಿರುವ ಇವರು ಅನೇಕ ರಾಜ್ಯಮಟ್ಟ, ರಾಷ್ಟ್ರಮಟ್ಟದ ಶಿಬಿರಗಳು, ಜಾಂಬೋರೇಟ್‌ಗಳಲ್ಲಿ ಸಹಾಯಕರಾಗಿ ಕೆಲಸ ಮಾಡಿರುತ್ತಾರೆ.

ಇದೀಗ ರಾಷ್ಟ್ರೀಯ ತರಬೇತಿ ಕೇಂದ್ರ ಪಚಮಡಿಯಲ್ಲಿ ಶಿಕ್ಷಣ ಪಡೆದು ಎ.ಯಲ್.ಟಿ. (ಸ್ಕೌಟ್ಸ್) ಆಗಿರುತ್ತಾರೆ.

ಶ್ರೀ ಎಂ. ಕೆ. ಖಾನ್ ರವರು, ಬೆಂಗಳೂರು ಬಳಿಯ ವರ್ತೂರಿನ ಕೆ. ಕೆ. ವಿದ್ಯಾಸಂಸ್ಥೆಯ ಆಡಳಿತಾಧಿಕಾರಿಗಳಾಗಿರುತ್ತಾರೆ. ಅಲ್ಲಿಯೇ ಸ್ಕೌಟ್ ಮಾಸ್ಟರೂ ಆಗಿರುತ್ತಾರೆ.

ಈಗ್ಗೆ 6 ವರ್ಷಗಳಿಂದಲೂ ವೈಟ್ ಫೀಲ್ಡ್ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳೂ, ಬೆಂಗಳೂರು ದಕ್ಷಿಣ ಜಿಲ್ಲೆಯ ಸಹಾಯಕ ಕಾರ್ಯದರ್ಶಿಗಳೂ ಆಗಿರುತ್ತಾರೆ. ಅನೇಕ ರಾಜ್ಯಮಟ್ಟ, ರಾಷ್ಟ್ರಮಟ್ಟ ಶಿಬಿರಗಳು, ಜಾಂಬೋರೇಟ್‌ಗಳಲ್ಲಿ ಸಹಾಯಕರಾಗಿ ಕೆಲಸ ಮಾಡಿರುತ್ತಾರೆ.



ಶ್ರೀ ಎಂ. ಕೆ. ಖಾನ್



ಶ್ರೀ ಚಂದ್ರಶೇಖರಾಚಾರ್

ಶ್ರೀ ಚಂದ್ರಶೇಖರಾಚಾರ್ ರವರು ಈಗ್ಗೆ ಸುಮಾರು ಹತ್ತು ವರ್ಷಗಳಿಂದ ಸ್ಕೌಟಿಂಗ್‌ನಲ್ಲಿ ಪರಿಚಿತರಾಗಿರುತ್ತಾರೆ. 1989ರಲ್ಲಿ ಹಿಮಾಲಯ ವುಡ್ ಬ್ಯಾಡ್ಜ್ ಪಡೆದ ಇವರು, ಅನೇಕ ತರಬೇತಿ ಶಿಬಿರಗಳಲ್ಲಿ ಸಹಾಯಕರಾಗಿದ್ದು, ಇದೀಗ 96 ಮೇ ತಿಂಗಳಿನಲ್ಲಿ ಎ. ಯಲ್. ಟಿ. (ಕಬ್ಸ್) ತರಬೇತಿ ಪಡೆದಿರುತ್ತಾರೆ. ಬೆಂಗಳೂರು ದಕ್ಷಿಣ ಜಿಲ್ಲೆಯ ಚಾಮರಾಜಪೇಟೆ ಆ ಬಳಿಕ ವಿಲ್ಸನ್‌ಗಾರ್ಡನ್ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳಾಗಿ ಅನೇಕ ಮೇಳಗಳನ್ನು ಸಂಘಟಿಸಿರುತ್ತಾರೆ.

ಈ ಮೂವರೂ ತರಬೇತುದಾರರಿಗೆ ನಮ್ಮ ಅಭಿನಂದನೆಗಳು. ರಾಜ್ಯ ಸಂಸ್ಥೆಯು ಇವರುಗಳಿಂದ, ಗುಣಾತ್ಮಕ ಅಭಿವೃದ್ಧಿಯ ದಿಶೆಯಲ್ಲಿ ಗಣನೀಯ ಸೇವೆಯನ್ನು ಆಶಿಸುತ್ತದೆ.

## ಹೊಸದಾಗಿ ಹಿಮಾಲಯ ವುಡ್ ಬ್ಯಾಡ್ಜ್ ಧಾರಕರ ವರ್ಗಕ್ಕೆ ಸೇರಿದ ಗೈಡರ್‌ಗಳು



ಶ್ರೀಮತಿ ರೇವತಿ

ಈ ಕೆಳಕಂಡ ಗೈಡರುಗಳು ಬುಲ್‌ಬುಲ್ಸ್ ವಿಭಾಗದಲ್ಲಿ ಹಿಮಾಲಯ ವುಡ್ ಬ್ಯಾಡ್ಜ್ ಅನ್ನು ಪಡೆದಿರುತ್ತಾರೆ. ಅವರುಗಳಿಗೆ ನಮ್ಮ ಹಾರ್ದಿಕ ಅಭಿನಂದನೆಗಳು. ಬುಲ್‌ಬುಲ್ಸ್ ವಿಭಾಗವನ್ನು ಬಲಪಡಿಸುವಲ್ಲಿ, ಗುಣಮಟ್ಟವನ್ನು ಹೆಚ್ಚಿಸುವಲ್ಲಿ ಈ ಗೈಡರುಗಳು ಶ್ರಮಿಸುವರೆಂದು ಆಶಿಸುತ್ತೇವೆ.



ಸಿಸ್ಟರ್ ಲೀನಾ ಡಯಾಸ್

ಶ್ರೀಮತಿ ಬಿ. ರೇವತಿ, ಗೈಡರ್, ಸೆಂಟ್ ಜೋಸೆಫ್ಸ್ ಕಾನ್ವೆಂಟ್, ಫ್ರೇಜರ್ ಟೌನ್, ಬೆಂಗಳೂರು-5

ಸಿಸ್ಟರ್ ಲೀನಾಡಯಾಸ್, ಗೈಡರ್, ಅನುಗ್ರಹ ಕಾನ್ವೆಂಟ್, ಅರೇಹಳ್ಳಿ, ಬೇಲೂರು, ಹಾಸನ ಜಿಲ್ಲೆ

---

We congratulate the following guiders who recently received theit H W B Certificates, we welcome them to the H W B Holders fold and expecr them to contribute their mite in improving Guiding qualitatively.

| | |
|---|---|
| Smt. Gayathri Gowda | KA 99/96 dt. 14-6-96, Bangalore Rural |
| Smt. Radha A. Joglekar | KA 100/96 dt. 14-6-96, North Canara |
| Smt. Kamala R. Haldipur | KA 101/96 dt. 14-6-96, North Canara |

Joint State Secretary
Bharat Scouts & Guides
Guide Wing, Bangalore

---

**Participation of Guides in Rover, Ranger Samagam at NTC Pachmarhi from 9-6-1996 to 13-9-1996**

Kumaris Vijaya Shivapuji and Sarikachavn from Bangalore, Kumaris Teena R. and Roopasri C. from Bangalore led by Smt. Meenakshi Rajesh Hal, Ranger Leader attended the Samagam representing the state. The R. R. Samagam was attended by more than 280 members from all parts of the country. The main attraction of the Samagam was the adventure activities offered to us by the NAI, Mr. Manchanda J.D. (S) was leader of the Samagam, Mrs. J. Johnston, J D. (G.) was the additional leader of the course.

Sri V. N. Joshi, ASC (S) Belagaum was instrumental in Karnataka team attaining the said Samagam.

# ಅಲ್ಲಲ್ಲಿ ಏನೇನು ?

## ಬೆಂಗಳೂರು ಉತ್ತರ ಜಿಲ್ಲೆ

### ರಾಜ್ಯ ಪುರಸ್ಕಾರ್ ಸ್ಕೌಟ್ ಗೈಡು ಪೂರ್ವಭಾವಿ ಸಿದ್ಧತಾ ಶಿಬಿರ

ರಾಜ್ಯ ಪುರಸ್ಕಾರ್ ಸ್ಕೌಟ್ ಗೈಡುಗಳ ಪೂರ್ವಭಾವಿ ಸಿದ್ಧತಾ ಶಿಬಿರವನ್ನು 1996ರ ಜೂನ್ ತಿಂಗಳು 9, 16, 23 ಮತ್ತು ಜುಲೈ 7 ರಂದು ಬೆಂಗಳೂರು ರಾಜ್ಯ ಸ್ಕೌಟ್ ಕಛೇರಿಯ ಆವರಣದಲ್ಲಿ ನಡೆಸಲಾಯಿತು. 275 ಸ್ಕೌಟ್/ಗೈಡುಗಳು ಶಿಬಿರದಲ್ಲಿ ಭಾಗವಹಿಸಿ ಶಿಕ್ಷಣ ಪಡೆದರು.

### ಸ್ಕೌಟರ್ / ಗೈಡರ್‌ಗಳ ಸೆಮಿನಾರ್

13-7-96 ರಂದು, ರಾಜ್ಯ ಕಛೇರಿಯ ಆವರಣದಲ್ಲಿ ಸ್ಕೌಟರ್, ಗೈಡರ್‌ಗಳ ಸೆಮಿನಾರ್ ನಡೆಸಲಾಯಿತು. 90 ದಳ ನಾಯಕರುಗಳು ಹಾಗೂ 8 ಸ॥ ಜಿಲ್ಲಾ ಆಯುಕ್ತರುಗಳು ಭಾಗವಹಿಸಿದರು. ರಾಜ್ಯ ತರಬೇತಿ ಆಯುಕ್ತ ಶ್ರೀ ನಾರಾಯಶೆಟ್ಟರು ಶಿಬಿರ ನಾಯಕರಾಗಿದ್ದರು. ಶ್ರೀಯುತರುಗಳಾದ ಧ್ರುವರಾವ್, ವಿ. ಕುಲಕರ್ಣಿ, ಶ್ರೀನಿವಾಸ ಮೂರ್ತಿ, ಶ್ರೀಮತಿಯರುಗಳಾದ ರವಿ ನೆಸ್ಲಿ, ಸುಶೀಲಾ ಗೋಪಾಲ್ ಮತ್ತು ಜಾನಕಿ ವೇಣುಗೋಪಾಲ್ ಮತ್ತು ವಿ. ಸುರಭಿ ಇವರುಗಳು ಸಹಾಯಕರುಗಳಾಗಿದ್ದರು. ರಾಜ್ಯ ಸಂಘಟನಾ ಆಯುಕ್ತ ಶ್ರೀ ಕೆ. ತಿಮ್ಮಪ್ಪನವರು ಶಿಬಿರಾರ್ಥಿಗಳನ್ನು ಉದ್ದೇಶಿಸಿ ಮಾತನಾಡಿದರು.

### ಸಾಮಾನ್ಯ ತಿಳುವಳಿಕೆ ಶಿಬಿರಗಳು

17-7-96 ರಂದು ಭಾವೀ ಸ್ಕೌಟರುಗಳ ಒತ್ತಾಸೆಗಾಗಿ ರಾಜ್ಯ ಕಛೇರಿಯ ಆವರಣದಲ್ಲಿ ಸಾಮಾನ್ಯ ತಿಳುವಳಿಕೆ ಶಿಬಿರವನ್ನು ನಡೆಸಲಾಯಿತು. 50 ಉಪಾಧ್ಯಾಯರುಗಳು ಭಾಗವಹಿಸಿದರು. ಶ್ರೀ ಕೆ. ಧ್ರುವರಾವ್ ಶಿಬಿರ ನಾಯಕರಾಗಿದ್ದರು. ಶ್ರೀಯುತರುಗಳಾದ ನಾರಾಯಣಶೆಟ್ಟಿ, (ರಾಜ್ಯ ತರಬೇತಿ ಆಯುಕ್ತ), ವಿ. ಕುಲಕರ್ಣಿ, ಪಿಚ್ಚುಪಿಳ್ಳೆ, ಜಿಲ್ಲಾ ತರಬೇತಿ ಆಯುಕ್ತ ಮತ್ತು ಶ್ರೀ ಚಲ್ಲಯ್ಯ, ಕೇಂದ್ರ ಸ್ಥಾನ ಆಯುಕ್ತ (ಸಾರ್ವಜನಿಕ ಸಂಪರ್ಕ) ಶ್ರೀಮತಿಯರುಗಳಾದ ವಿ. ಸುರಭಿ ಮತ್ತು ಜಾನಕಿ ವೇಣುಗೋಪಾಲ್ ಇವರುಗಳು ಸಹಾಯಕರಾಗಿದ್ದರು.

16-7-96ರಂದು ಹಿರಿಯ ಪ್ರಾಥಮಿಕ ಶಾಲೆಗಳ ಮುಖ್ಯರುಗಳ ಒತ್ತಾಸೆಗಾಗಿ ಸಾಮಾನ್ಯ ತಿಳುವಳಿಕೆ ಶಿಬಿರವನ್ನು ಮಠದಹಳ್ಳಿಯಲ್ಲಿ ನಡೆಸಲಾಯಿತು. 55 ಶಾಲಾ ಮುಖ್ಯಸ್ಥರುಗಳು ಭಾಗವಹಿಸಿದ್ದರು. ಶ್ರೀ ನಾರಾಯಶೆಟ್ಟಿ (ರಾಜ್ಯ ತರಬೇತಿ ಆಯುಕ್ತ) ಶ್ರೀ ಚಲ್ಲಯ್ಯ (ಸಾರ್ವಜನಿಕ ಸಂಪರ್ಕ ಆಯುಕ್ತ) ಶ್ರೀಮತಿ ರವಿ ನೆಸ್ಲಿ (ಎಲ್. ಟಿ. ಗೈಡ್ಸ್) ಶ್ರೀಮತಿ ಜಾನಕಿ ವೇಣುಗೋಪಾಲ್, ಎಲ್. ಟಿ. ಗೈಡ್ಸ್ ಇವರುಗಳು ಬೋಧಕವರ್ಗದಲ್ಲಿದ್ದರು.

ಯಲಹಂಕ ವಿವೇಕ್ ಬಾಲಮಂದಿರದಲ್ಲಿ 16 7-96 ರಂದು ನಡೆದ ಸಾಮಾನ್ಯ ಮಾಹಿತಿ ಶಿಬಿರದಲ್ಲಿ 40 ಶಾಲಾ ಮುಖ್ಯಸ್ಥರುಗಳು ಭಾಗವಹಿಸಿದ್ದರು. ಶ್ರೀಯುತರುಗಳಾದ ಡಿ. ಯಸ್. ಶಾಸ್ತ್ರಿ, ರಾಂ ಸಿಂಗ್ (ಸ॥ ಜಿಲ್ಲಾ ಆಯುಕ್ತ) ಎನ್. ಚಂದ್ರಶೇಖರ್ (ಜಿಲ್ಲಾ ಆಯುಕ್ತರು) ಇವರುಗಳು ಶಿಬಿರದ ಯಶಸ್ಸಿಗೆ ಕಾರಣರಾದರು.

22-7-96 ರಂದು ಸಾನೆಗುರುವನಹಳ್ಳಿಯಲ್ಲಿ ನಡೆದ ಸಾಮಾನ್ಯ ಮಾಹಿತಿ ಶಿಬಿರದಲ್ಲಿ 135 ಶಾಲಾ ಮುಖ್ಯಸ್ಥರುಗಳು ಭಾಗವಹಿಸಿದ್ದರು. ಸ॥ ರಾಜ್ಯ ಆಯುಕ್ತ ಶ್ರೀ ಟಿ. ಯಸ್. ಲೂಕಾಸ್ ರವರು ಶಿಬಿರ ನಾಯಕರಾಗಿದ್ದರು. ಶ್ರೀ ನಾರಾಯಶೆಟ್ಟಿ (ರಾಜ್ಯ ತರಬೇತಿ ಆಯುಕ್ತ) ಶ್ರೀಮತಿ ರವಿ ನೆಸ್ಲಿ (ಎಲ್. ಟಿ. ಗೈಡ್ಸ್) ಶ್ರೀಮತಿ ಜಾನಕಿ

ವೇಣುಗೋಪಾಲ್ (ಎಯಸ್‌ಒಸಿ ಗೈಡ್ಸ್) ಇವರುಗಳು ಸಹಾಯಕರಾಗಿದ್ದರು. ಜಿಲ್ಲಾ ಆಯುಕ್ತ (ಸ್ಕೌ) ಜಿಲ್ಲಾ ಆಯುಕ್ತೆ (ಗೈ) ಹಾಗೂ ಸ॥ ಜಿಲ್ಲಾ ಆಯುಕ್ತರುಗಳು ಶಿಬಿರದಲ್ಲಿ ಹಾಜರಿದ್ದು ವಿವಿಧ ರೀತಿಯಲ್ಲಿ ಸಹಾಯ ಮಾಡಿ ಶಿಬಿರದ ಯಶಸ್ಸಿಗೆ ಕಾರಣರಾದರು.

ಬೆಂಗಳೂರು ಉತ್ತರ ಜಿಲ್ಲೆಯ, ಜಿಲ್ಲಾ ಸಮಿತಿಯ ವಾರ್ಷಿಕ ಸಭೆಯು 18-7-96 ರಂದು ರಾಜ್ಯ ಕಛೇರಿಯ ಸಭಾ ಭವನದಲ್ಲಿ ನಡೆಯಿತು.

ಕಳೆದ ಸಂಚಿಕೆಯಲ್ಲಿ ವರದಿಯಾಗಿರುವ ರಾಜ್ಯಮಟ್ಟದ ರಾಷ್ಟ್ರಪತಿ ಸ್ಕೌಟ್ ಗೈಡ್‌ಗಳ ಪೂರ್ವಭಾವಿ ಸಿದ್ಧತಾ ಶಿಬಿರದಲ್ಲಿ, ಸಕ್ರಿಯವಾಗಿ ಪಾತ್ರವಹಿಸಿದ ಬೆಂಗಳೂರು ದಕ್ಷಿಣ ಜಿಲ್ಲೆಯ ಜಿಲ್ಲಾ ಆಯುಕ್ತೆ (ಗೈಡ್ಸ್) ಆದ ಶ್ರೀಮತಿ ಸುಶೀಲಾ ಗೋಪಾಲ್‌ರವರು ಶಿಬಿರದ ಶಿಕ್ಷಣ ತಂಡದ ಭಾಗವಾಗಿ ಸೇವೆ ಸಲ್ಲಿಸಿದ ಏಕೈಕ ಜಿಲ್ಲಾ ಗೈಡ್ ಆಯುಕ್ತೆಯಾಗಿದ್ದರು.

ಯಲಹಂಕ ಸ್ಥಳೀಯ ಸಂಸ್ಥೆಯ ಆಶ್ರಯದಲ್ಲಿ 1995–96ನೇ ಸಾಲಿನ ಸ್ಥಳೀಯ ಮಟ್ಟದ ಮೇಳವು 2-3-96 ರಂದು ಯಲಹಂಕದ ಎಂ.ಇ.ಸಿ. ಜೂನಿಯರ್ ಕಾಲೇಜು ಆವರಣದಲ್ಲಿ ನಡೆಯಿತು. ಪ್ರದೇಶದ ವಿವಿಧ ಶಾಲಾ ಕಾಲೇಜು ಗಳಿಂದ, 11 ಸ್ಕೌಟರ್ ಗೈಡರ್‌ಗಳೂ ಸೇರಿದಂತೆ 250 ಮಕ್ಕಳು ಭಾಗವಹಿಸಿದ್ದರು.

ಅನೇಕ ಸ್ಕೌಟ್ ಗೈಡ್ ಕೌಶಲ್ಯಗಳನ್ನೂ, ಆಟಗಳನ್ನೂ, ಸಾಂಸ್ಕೃತಿಕ ಚಟುವಟಿಕೆಗಳನ್ನೂ ಹಮ್ಮಿಕೊಳ್ಳಲಾಗಿತ್ತು. ಸ್ಕೌಟರ್‌ಗಳಾದ ಮಡಿಯಪ್ಪ ಮತ್ತು ಜಿಲ್ಲಾ ತರಬೇತಿ ಆಯುಕ್ತ ಪಿಚ್ಚುಪಿಳ್ಳೈ ಇವರುಗಳೂ, ಗೈಡರುಗಳಾದ ಶಾಂತಿಲತಾ ಮತ್ತು ಹೆಚ್. ಜಯಲಕ್ಷ್ಮಮ್ಮನವರು, ಮುಖ್ಯೋಪಾಧ್ಯಾಯನಿ, ಶ್ರೀಮತಿ ವಿಶಾಲಾಕ್ಷಿರವರು ಸ್ಥಳೀಯ ಕಾರ್ಪೋರೇಷನ್ ಬ್ಯಾಂಕ್, ಬೃಂದಾವನ್ ಸಾಫ್ಟ್ ಡ್ರಿಂಕ್ಸ್, ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಎನ್. ಚಂದ್ರಶೇಖರ್, ಇವರುಗಳೂ ಮೇಳದ ಯಶಸ್ಸಿಗೆ ಕಾರಣರಾದರು.

ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು, ಮುಖ್ಯ ಅತಿಥಿಗಳಾಗಿ ಆಗಮಿಸಿ, ಮೇಳಕ್ಕೆ ಶೋಭೆಯನ್ನು ತಂದರು. ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಎನ್. ಚಂದ್ರಶೇಖರ್ ಅವರನ್ನೂ, ಸ॥ ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ರಾಮುಸಿಂಗ್ ಅವರನ್ನೂ ಪ್ರಮಾಣಪತ್ರ ನೀಡಿ ಗೌರವಿಸಿದರು. ರಾಜ್ಯ ಸಂಘಟನಾ ಆಯುಕ್ತ ಶ್ರೀ ತಿಮ್ಮಪ್ಪನವರು, ಜಿಲ್ಲಾ ಕಾರ್ಯದರ್ಶಿ, ಶ್ರೀ ಕುಲಕರ್ಣಿಯವರಿಗೆ ವುಡ್ ಬಾಡ್ಜ್ ನೀಡಿ ಗೌರವಿಸಿದರು. ಸ್ಥಳೀಯ ಸ॥ ಕಾರ್ಯದರ್ಶಿ ಶ್ರೀಮತಿ ನಾಗರತ್ನರವರು ವಂದನಾರ್ಪಣೆ ಮಾಡಿದರು.

## ಬೆಂಗಳೂರು ಗ್ರಾಮಾಂತರ ಜಿಲ್ಲೆ

ಮಾಗಡಿ ತಾಲ್ಲೂಕು ಸ್ಥಳೀಯ ಸಂಸ್ಥೆಯ ವತಿಯಿಂದ 29-2-96 ಹಾಗೂ 1-3-1996 ದಿನಗಳಂದು ಸ್ಥಳೀಯ ಮಟ್ಟದ ಸ್ಕೌಟ್ ಗೈಡ್ ಮೇಳವು ನಡೆಯಿತು. 325 ಮಂದಿ ಸ್ಕೌಟುಗಳು, 125 ಗೈಡುಗಳು ಮತ್ತು 35 ಮಂದಿ ಸ್ಕೌಟರ್ ಗೈಡರ್‌ಗಳು ಭಾಗವಹಿಸಿದ್ದರು. ಸಂಸ್ಥೆಯ ಉಪಾಧ್ಯಕ್ಷರೂ, ಮಾಗಡಿ ಪುರಸಭಾಧ್ಯಕ್ಷರೂ ಆದ ಶ್ರೀ ಬಿ. ಸಿದ್ದಲಿಂಗಪ್ಪನವರು ಉದ್ಘಾಟಿಸಿದರು. ಮಾಗಡಿ ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಪುಟ್ಟಸ್ವಾಮಿಯವರು ಉದ್ಘಾಟನಾ ಭಾಷಣ ಮಾಡಿದರು. 29-2-96ರ ಸಂಜೆ ನಡೆದ ಭವ್ಯ ಶಿಬಿರಾಗ್ನಿಯನ್ನು ಸಂಸ್ಥೆಯ ಉಪಾಧ್ಯಕ್ಷೆ ಶ್ರೀಮತಿ ಲಕ್ಷ್ಮಮ್ಮ ನಂಜಯ್ಯನವರು ಪ್ರಾರಂಭಿಸಿ, ಉಪಸ್ಥಿತರಿದ್ದರು. ಸಂಸ್ಥೆಯ ಹಿತೈಷಿಗಳು ಅಧಿಕ ಸಂಖ್ಯೆಯಲ್ಲಿ ಉಪಸ್ಥಿತರಿದ್ದು, ವೀಕ್ಷಿಸಿ ಆನಂದಿಸಿದರು.

1-3-96 ರಂದು ನಗರದ ಪ್ರಮುಖ ಬೀದಿಗಳಲ್ಲಿ ನಡೆದ ಪಥಚಲನವು ಆಕರ್ಷಣೀಯವಾಗಿದ್ದಿತು. ವಿವಿಧ ಸ್ಪರ್ಧೆಗಳು ನಡೆದವು. ಅದೇ ದಿನ ಮಧ್ಯಾಹ್ನ ತಾ|| ಪಂ|| ಉಪಾಧ್ಯಕ್ಷರಾದ ಶ್ರೀಮತಿ ದಾಕ್ಷಾಯಿಣಿ ರಘುನಾಥ್‌ರವರು ಅಧ್ಯಕ್ಷತೆ ವಹಿಸಿ, ಮುಕ್ತಾಯ ಸಮಾರಂಭವನ್ನು ನಡೆಸಿಕೊಟ್ಟರು. ತಾ|| ಪಂ|| ಉಪಾಧ್ಯಕ್ಷರಾದ ಶ್ರೀ ಎಂ. ರಾಮಣ್ಣ ನವರು ಪ್ರಶಸ್ತಿಪತ್ರ ಹಾಗೂ ಪಾಲ್ಗೊಂಡ ಬಗ್ಗೆ ಪ್ರಮಾಣಪತ್ರಗಳನ್ನು ವಿತರಿಸಿದರು. ಸಂಸ್ಥೆಯ ಉಪಾಧ್ಯಕ್ಷ ಹಾಗೂ ಪುರಸಭಾ ಸದಸ್ಯ ಶ್ರೀ ರಂಗನಾಥ್‌ರವರು ಬಹುಮಾನ ವಿತರಿಸಿದರು. ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷೆ ಶ್ರೀಮತಿ ಕಲ್ಪನಾ ಶಿವಣ್ಣನವರು ಆಗಮಿಸಿ ಮೇಳಕ್ಕೆ ಕಳೆಯನ್ನು ತಂದರು.

ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಪುಟ್ಟಸ್ವಾಮಿಯವರು, ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಬಿ. ನಂಜುಂಡಯ್ಯ ನವರು ಹಾಗೂ ಸ್ಕೌಟರ್ ಶ್ರೀ ಎಲ್. ನಂಜಯ್ಯನವರು, ಇವರುಗಳು ಮೇಳದ ಯಶಸ್ಸಿಗೆ ಕಾರಣರಾದರು.

## ಶಿವಮೊಗ್ಗ ಜಿಲ್ಲೆ

### ಶಿವಮೊಗ್ಗದ "ಮಲ್ನಾಡು ಮುಕ್ತದಳ"ದ ಶ್ಲಾಘನೀಯ ಕಾರ್ಯ

ಶಿವಮೊಗ್ಗ "ಮಲ್ನಾಡು ಮುಕ್ತದಳ"ದ ರೋವರ್‌ಗಳು "ಆಶಾಕಿರಣ" – ಬುದ್ಧಿ ಮಾಂದ್ಯ ಮಕ್ಕಳ ವಸತಿ ಶಾಲೆಯನ್ನು "ದತ್ತು ಸ್ವೀಕಾರ" ಮಾಡಿಕೊಂಡಿರುವ ಬಗ್ಗೆ ಈಗಾಗಲೇ ವರದಿ ಮಾಡಿರುತ್ತೇವೆ. ಶಿವಮೊಗ್ಗ ರೋಟರಿ ಕ್ಲಬ್ ನವರ ಆಶ್ರಯದಲ್ಲಿ ನಡೆಯುತ್ತಿರುವ ಈ ಶಾಲೆಯನ್ನು ಈಗ್ಗೆ 2 ವರ್ಷಗಳಿಂದಲೂ ದಳದವರು ದತ್ತು ಸ್ವೀಕಾರ ಮಾಡಿಕೊಂಡು ಸುಂದರವಾದ ಉದ್ಯಾನವನವನ್ನು ರೂಪಿಸಿರುತ್ತಾರೆ. ಸದರೀ ಸ್ವೀಕೃತ ಶಾಲೆಯನ್ನು, ರಾಜ್ಯ



ಸಂಸ್ಥೆಯ ರಾಜ್ಯ ಮುಖ್ಯ ಆಯುಕ್ತ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರೂ, ರಾಜ್ಯ ಕಾರ್ಯದರ್ಶಿ ಪ್ರೊ|| ಸೂರ್ಯನಾರಾಯಣಪ್ಪನವರೂ, ಮತ್ತಿತರ ಪದಾಧಿಕಾರಿಗಳೂ 30-12-95 ರಂದು ಸಂದರ್ಶಿಸಿ ತಮ್ಮ ಮೆಚ್ಚುಗೆ

ಯನ್ನು ಸೂಚಿಸಿದರು. ಭೇಟಿಯ ಜ್ಞಾಪಕಾರ್ಥ ಎಲ್ಲರೂ ಒಂದೊಂದು ಸಸಿಯನ್ನು ನೆಟ್ಟು ಉದ್ಯಾನವನ ಸಂವರ್ಧನೆಗೆ ನಾಂದಿ ಹಾಡಿದರು.

ಮಲ್ನಾಡ್ ರೋವರ್‌ಗಳನ್ನು ಈ ಶ್ಲಾಘನೀಯ ಕಾರ್ಯಕ್ಕಾಗಿ ಅಭಿನಂದಿಸುತ್ತೇವೆ. ಅವರ ಈ ಸ್ತುತ್ಯಾರ್ಹ ಕಾರ್ಯದಲ್ಲಿ ಯಶಸ್ಸನ್ನು ಕೋರುತ್ತೇವೆ.

**ಸ್ಥಳೀಯ ಸಂಸ್ಥೆ, ಶಿಕಾರಿಪುರ**

ಶಿಕಾರಿಪುರ ಸ್ಥಳೀಯ ಸಂಸ್ಥೆಯ ಆಶ್ರಯದಲ್ಲಿ 13, 14-7-96 ಎರಡು ದಿನಗಳಂದು, ಪುನಶ್ಚೇತನಾ ಶಿಬಿರವು ನಡೆಯಿತು. 16 ಜನ ಸ್ಕೌಟರ್ ಗೈಡರುಗಳು ಭಾಗವಹಿಸಿದ ಈ ಶಿಬಿರದಲ್ಲಿ, ಕಾರ್ಯದರ್ಶಿಗಳಾದ ಶ್ರೀ ಬಿ. ಸಿದ್ದಪ್ಪ, ಖಜಾಂಚಿಗಳಾದ ಶ್ರೀಮತಿ ಪಿ. ಸಾವಿತ್ರಮ್ಮ, ಇವರುಗಳು ಸಂಪನ್ಮೂಲ ವ್ಯಕ್ತಿಗಳಾಗಿದ್ದರು. ಸ॥ ಜಿಲ್ಲಾ ಆಯುಕ್ತ ಶ್ರೀ ವೇಣುಗೋಪಾಲ್‌ರವರು ಶಿಬಿರವನ್ನು ಉದ್ಘಾಟಿಸಿದರು.

ಶಿವಮೊಗ್ಗದಲ್ಲಿ ಅಕ್ಟೋಬರ್‌ನಲ್ಲಿ ನಡೆಸಲು ಉದ್ದೇಶಿಸಿರುವ ರಾಜ್ಯಮಟ್ಟದ ಬುಲ್‌ಬುಲ್‌ಗಳ ಉತ್ಸವ ಸಂಬಂಧ ವಾಗಿ 8-6-96 ರಂದು ಕಾರ್ಯಕಾರಿ ಸಮಿತಿಯು ಸಭೆ ಸೇರಿ ವಿವಿಧ ಉಪಸಮಿತಿಗಳನ್ನು ರಚಿಸಿತು. ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಕೆ. ವಿ. ನಾರಾಯಣಶಾಸ್ತ್ರಿರವರು, ಅಧ್ಯಕ್ಷತೆ ವಹಿಸಿದ್ದರು. ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಶ್ರೀಮತಿ ಎಸ್. ರಾವ್‌ರವರೂ, ಮತ್ತಿತರ ಪದಾಧಿಕಾರಿಗಳೂ ಹಾಜರಿದ್ದರು.

## ತುಮಕೂರು ಜಿಲ್ಲೆ

ತುಮಕೂರು ಜಿಲ್ಲೆಯ ತುರುವೇಕೆರೆ ತಾ॥ ಬಾಣಸಂದ್ರದಲ್ಲಿ ಶ್ರೀ ಬಿ. ಜಿ. ರವಿಕುಮಾರ್ ಬಿನ್ ಸಿ. ಹೆಚ್. ಗಂಗಾಧರಪ್ಪ ಇವರು ಸ್ಕೌಟ್ ಮಾಸ್ಟರಾಗಿ ಸ್ವತಂತ್ರ ದಳವನ್ನು ನಡೆಸುತ್ತಿದ್ದಾರೆ. ಇವರು ದಿನಾಂಕ 26-6-96ರಂದು ಬೆಂಗಳೂರಿನಿಂದ ಬೀರೂರಿಗೆ ಹೋಗುತ್ತಿದ್ದ ರೈಲುಗಾಡಿಯಲ್ಲಿ ಪ್ರಯಾಣಿಸು ತ್ತಿದ್ದರು. ಅನುಮಾನಾಸ್ಪದ ರೀತಿಯಲ್ಲಿ ಪ್ರಯಾಣ ಮಾಡುತ್ತಿದ್ದ ಮೂವರು ಬಾಲಕರನ್ನು ಗಮನಿಸಿದರು. ಕೂಡಲೇ ವಿವರಗಳನ್ನು ಸಂಗ್ರಹಿಸಿದರು. ಆ ಮೂವರೂ ಬೆಂಗಳೂರು ಶ್ರೀರಾಮಪುರದ ಡೆಕ್ಕನ್ ಇಂಗ್ಲಿಷ್ ಶಾಲೆಯ 7ನೆಯ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿರುವುದಾಗಿಯೂ, ಅರಸೀಕೆರೆಗೆ ಹೋಗುತ್ತಿರು ವುದಾಗಿಯೂ ಕಂಡುಕೊಂಡರು. ಅಲ್ಲಿಂದಲೇ ಅವರನ್ನು ಇಳಿಸಿ, ಶಾಲೆಯಲ್ಲಿ ವಿಚಾರಿಸಿ, ಮರು ರೈಲಿನಲ್ಲಿ ಅವರನ್ನು ಬೆಂಗಳೂರಿಗೆ ವಾಪಸ್ ಕರೆತಂದು, ಅವರು ಗಳ ತಂದೆತಾಯಿಯರಿಗೆ ಒಪ್ಪಿಸಿದ್ದಾರೆ. ಈ ಕಾರ್ಯವು ಶ್ಲಾಘನೀಯವಾದುದು, ಅನುಕರಣೀಯವಾದುದು. ಅವರನ್ನು ಅಭಿನಂದಿಸುತ್ತಿದ್ದೇವೆ.



ತುಮಕೂರು ಜಿಲ್ಲಾ ಶೈಕ್ಷಣಿಕ ಇಲಾಖೆಯ ಉಪನಿರ್ದೇಶಕರ ಆದೇಶದ ಮೇರೆಗೆ ಜೂನ್ 16 ರಿಂದ ಇಬ್ಬರು ಜಿಲ್ಲಾ ಸಂಘಟನಾ ಆಯುಕ್ತರುಗಳ ಸೇವೆಯನ್ನು ತುಮಕೂರು ಜಿಲ್ಲಾ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ಎರವಲು ನೀಡಲಾಗಿದೆ.

ದಿನಾಂಕ 20-6-96 ರಂದು ಸ್ಕೌಟ್ ಭವನದಲ್ಲಿ ಸ್ಥಳೀಯ ಸಂಸ್ಥೆಗಳ ಕಾರ್ಯದರ್ಶಿಗಳ ಹಾಗೂ ಸಹಾಯಕ ಜಿಲ್ಲಾ ಆಯುಕ್ತರುಗಳ ಸಮ್ಮೇಳನವು ಜರುಗಿತು.

ದಿನಾಂಕ 26-6-96 ರಂದು ಜಿಲ್ಲೆಯ ದಳ ನಾಯಕರುಗಳ ಸಭೆಯು ಜರುಗಿತು. 110 ನಾಯಕರುಗಳು ಹಾಜರಿದ್ದು, 10-6-96 ರಂದು ದೈವಾಧೀನರಾದ ಜಿಲ್ಲೆಯ ನೆಚ್ಚಿನ ನಾಯಕ ದಿ|| ಶಂಕರ್‌ರವರ ಆತ್ಮಕ್ಕೆ ಶಾಂತಿಯನ್ನು ಕೋರಿ ಸಂತಾಪ ಸೂಚಕ ಸಭೆ ನಡೆಸಲಾಯಿತು. ಅದೇ ದಿನ ಮಧ್ಯಾಹ್ನ ನಡೆದ ಸಭೆಯಲ್ಲಿ ಬರಲಿರುವ 23ನೆಯ ರಾಜ್ಯ ಜಾಂಬೋರೇಟ್ ಬಗ್ಗೆ ವಿವರಗಳನ್ನು ನೀಡಲಾಯಿತು.

ಜೂನ್ ತಿಂಗಳಿನಲ್ಲಿ ಮಧುಗಿರಿ, ತಿಪಟೂರು ಮತ್ತು ತುರುವೇಕೆರೆಗಳಲ್ಲಿ ತಲಾ ಒಂದೊಂದು ಸಾಮಾನ್ಯ ಮಾಹಿತಿ ಶಿಬಿರಗಳನ್ನು ನಡೆಸಲಾಯಿತು. ಅಧಿಕ ಸಂಖ್ಯೆಯಲ್ಲಿ ಶಿಕ್ಷಕರು ಭಾಗವಹಿಸಿದ್ದರು.

## ರಾಯಚೂರು ಜಿಲ್ಲೆ

ರಾಯಚೂರಿನ ಸ್ಕೌಟ್ ಭವನದ ಆವರಣದಲ್ಲಿ 9-7-96 ರಿಂದ 13-7-96ರ ವರೆಗೆ ಜಿಲ್ಲೆಯ ಗೈಡುಗಳಿಗಾಗಿ ಪದಕಗಳ ತರಬೇತಿ ಶಿಬಿರವು ನಡೆಯಿತು. ಜಿಲ್ಲೆಯ ವಿವಿಧ ಭಾಗಗಳಿಂದ 63 ಗೈಡುಗಳು ಶಿಬಿರದಲ್ಲಿ ಭಾಗವಹಿಸಿದ್ದರು. ಗೈಡ್ ಕ್ಯಾಪ್ಟನ್ ಶ್ರೀಮತಿ ಕ್ರಿಸ್ಟೀನಾ ಮೀರಾಬಾಯಿಯವರು ಶಿಬಿರ ನಾಯಕಿಯಾಗಿದ್ದರು. ಗೈಡ್ ಕ್ಯಾಪ್ಟನ್‌ಗಳಾದ ಶ್ರೀಮತಿ ಲಕ್ಷ್ಮೀಬಾಯಿ, ಮಂಜೂಷಾ ಕುಮಾರಿ, ಅಜೀಜಾ ಸುಲ್ತಾನಾ, ಕಲ್ಯಾಣಿ ಮತ್ತು ಪ್ರೇಮಲತಾ ಇವರುಗಳು ಸಹಾಯಕರಾಗಿದ್ದರು. ಜಿಲ್ಲಾ ಸಂಘಟನಾ ಆಯುಕ್ತೆ ಶ್ರೀಮತಿ ಕಲ್ಪನಾ ಶಿಬಿರದ ಸಹ ನಾಯಕಿಯಾಗಿದ್ದರು.

9-7-96 ರಂದು ಜಿಲ್ಲಾ ಸ್ಕೌಟ್ ಆಯುಕ್ತ (ಸ್ಕೌಟ್ಸ್) ಶ್ರೀ ಕೆ. ತಿಮ್ಮಯ್ಯನವರ ಅಧ್ಯಕ್ಷತೆಯಲ್ಲಿ ಸರ್ಕಾರಿ ಬಾಲಕಿಯರ ಪದವಿ ಪೂರ್ವ ಕಾಲೇಜು ಪ್ರಾಂಶುಪಾಲ ಶ್ರೀ ಬಾಲಕಿಶನ್‌ರವರಿಂದ ಶಿಬಿರದ ಉದ್ಘಾಟನೆಯಾಯಿತು. ಶ್ರೀ ವಿನೋದ ಶ್ರೋತ್ರಿಯಾ ಅತಿಥಿಯಾಗಿದ್ದರು

10-7-96 ರಂದು ನಡೆದ ಶಿಬಿರಾಗ್ನಿಯನ್ನು ಟ್ರಾಫಿಕ್ ಪೋಲಿಸ್ ಇನ್ಸ್‌ಪೆಕ್ಟರ್ ಶ್ರೀ ಗಾಳಿ ರವರು ಉದ್ಘಾಟಿಸಿದರು. ನಗರದ ಪ್ರಸಿದ್ಧ ವಾಣಿಜ್ಯೋದ್ಯಮಿ ಶ್ರೀ ರಮೇಶ್‌ಜೈನ್ ರವರು ಅತಿಥಿಗಳಾಗಿದ್ದರು.

12-7-96 ರಂದು ನಡೆದ ಮುಕ್ತಾಯ ಸಮಾರಂಭಕ್ಕೆ ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಕವಿತಾ ಪಾಟೀಲ್ ಅಧ್ಯಕ್ಷತೆ ವಹಿಸಿದ್ದರು. ಜಿಲ್ಲಾ ವಾರ್ತಾ ಪ್ರಚಾರಾಧಿಕಾರಿ ಶ್ರೀ ಬಸವರಾಜ್ ಪಾರಾರವರು ಮುಖ್ಯ ಅತಿಥಿಗಳಾಗಿದ್ದರು. ಜಿಲ್ಲಾ ಆಯುಕ್ತ ಶ್ರೀ ಕೆ. ತಿಮ್ಮಪ್ಪ ಮತ್ತು ಜಿಲ್ಲಾ ಕಾರ್ಯದರ್ಶಿ ಶ್ರೀ ನರಸಿಂಹ ಮೂರ್ತಿ ಉಪಸ್ಥಿತರಿದ್ದರು.

13-7-96 ರಂದು ಬೆಳಿಗ್ಗೆ ಸರ್ವ ಧರ್ಮ ಪ್ರಾರ್ಥನೆ ಆದ ಬಳಿಕ ಜಿಲ್ಲಾ ಕ್ರೀಡಾಂಗಣ, ಟ್ರಾಫಿಕ್ ಪೋಲಿಸ್ ಸ್ಟೇಷನ್ ಮತ್ತು ಹಾಷ್ಮಿಯ ಶಾಲೆ ಆವರಣಗಳಲ್ಲಿ ಸ್ವಚ್ಛತಾ ಕಾರ್ಯಕ್ರಮವನ್ನೇರ್ಪಡಿಸಲಾಗಿದ್ದಿತು. ಪ್ರಾರ್ಥನಾ ಸಭೆಯಲ್ಲಿ ಪ್ರಾಚಾರ್ಯ ಶ್ರೀ ಶಿವಬಸಪ್ಪ ಮಾಲಿ ಪಾಟೀಲ್ ಮತ್ತು ಹಲವಾರು ಪೋಷಕರುಗಳು ಹಾಜರಿದ್ದರು. ಅದೇ ಸಂಜೆ ವಿಧ್ಯುಕ್ತವಾಗಿ ಶಿಬಿರವು ಮುಗಿಯಿತು.

## Information Course at Raichur

The District Association, Raichur organised an Information Course for the Heads of the Institutions & Trg. College on 23-7-96 at Zilla Parishad Meeting Hall, There were 70 participants and 10 staff members.

Following were diginitaries present during the Information Course.

1. Sri Thogari Hanumanthappa, President ZP as chief guest.

2. Sri Ramachandra Reddy, Chairman, Education Sub Committee, Zilla Panchayat, Raichur who Inaugurated the course by lighting the lamp.

3. Sri K. Prahaladhachar, DDPI Raichur, and Sri H. H. Budhagumpa, BEO, Raichur attended the inaugural function as chief guests.

Sri Thimmaiah, District Commissioner (S) presided over the inaugural function Sri R. Narasimha Murthy, District Secretary welcomed the guests and the participants. Smt. Kavita Patil, District Commissioner (G) was also present on the occasion.

Sri K. Thimmappa, SOC (S) was Leader of the course. Sri Narayana Shetty STC (S) Assisted the course. Sri Anil Kumar, Asst. Secretary, Smt. Kalpana DOC (G) and Smt. Kalaivani helped the DA. in making the course a success.

## ಹಾಸನ ಜಿಲ್ಲೆ

ಅರಸೀಕೆರೆಯ ಸೆಂಟ್ ಮೇರಿಸ್ ಪ್ರೌಢ ಶಾಲೆಯ 6 ಗೈಡುಗಳು ಮತ್ತು 20 ಸ್ಕೌಟುಗಳು, ಸ್ಕೌಟರ್ ಶ್ರೀ ಕೆ. ಯಂ. ಇಟಗಿಯವರ ನೇತೃತ್ವದಲ್ಲಿ ನಗರದ ಸಮೀಪದ ತಿರುಪತಿ ಬೆಟ್ಟಕ್ಕೆ ಸಾಹಸ ಸಂಚಾರ ಹೋಗಿದ್ದರು. ದಾರಿಯಲ್ಲಿ ಬರುವ "ಸಂಪೂರ್ಣ" ಕೃಷಿ ಕ್ಷೇತ್ರದಲ್ಲಿ ತೆಂಗಿನ ಬೇಸಾಯದ ಬಗ್ಗೆ ಪ್ರಾತ್ಯಕ್ಷಿಕೆಯನ್ನು ವೀಕ್ಷಿಸಿ ಮಾಹಿತಿ ಪಡೆದರು.

## ಚಿಕ್ಕಮಗಳೂರು ಜಿಲ್ಲೆ

ಚಿಕ್ಕಮಗಳೂರು ಜಿಲ್ಲಾ ಸಂಸ್ಥೆಯ ಜಿಲ್ಲಾ ಸಮಿತಿಯ ಸಭೆಯು 3.7.96 ರಂದು ಸಂಸ್ಥೆಯ ಅಧ್ಯಕ್ಷರೂ ಜಿಲ್ಲಾಧಿಕಾರಿಗಳೂ ಆದ ಶ್ರೀ ಐ. ಯಸ್. ಯನ್. ಪ್ರಸಾದ್‌ರವರ ಅಧ್ಯಕ್ಷತೆಯಲ್ಲಿ ನಡೆಯಿತು. 95-96 ರ ಸಾಲಿನ ವಾರ್ಷಿಕ ವರದಿ, ಲೆಕ್ಕ ಪತ್ರಗಳ ಪರಿಶೀಲನೆ ಹಾಗೂ 96-97 ರ ಆಯವ್ಯಯ ಅಂದಾಜು ಮತ್ತು ಯೋಜಿತ ಕಾರ್ಯ ಕ್ರಮಗಳ ಅವಲೋಕನೆಯ ನಂತರ, ಜೀವರಹಳ್ಳಿ - ತೇಗೂರು ಬಳಿಯ ಜಿಲ್ಲಾ ಸ್ಕೌಟ್ ಗೈಡ್ ತರಬೇತಿ ಕೇಂದ್ರದ ಬೆಳವಣಿಗೆ ಮತ್ತು ಪ್ರಗತಿಯ ಬಗ್ಗೆ ಚರ್ಚಿಸಿದರು.

## ಮೈಸೂರು ನಗರ ಜಿಲ್ಲೆ

ಮೈಸೂರು ನಗರ ಜಿಲ್ಲೆಯ ಆಶ್ರಯದಲ್ಲಿ 17-6-96 ರಂದು ಸಾಮಾನ್ಯ ಮಾಹಿತಿ ಶಿಬಿರವು ನಡೆಯಿತು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ, ಮೈಸೂರು ದಕ್ಷಿಣ ವಲಯ ಸ್ಥಳೀಯ ಸಂಸ್ಥೆಯ ಸದಸ್ಯರ ವಾರ್ಷಿಕ ಸಭೆಯು 21-6-1996 ರಂದು ನಡೆದು, ಶ್ರೀಮತಿ ಜೆ ಕಮಲಾರಾಮನ್, ಅಧ್ಯಕ್ಷರಾಗಿಯೂ, ಶ್ರೀ ಎಸ್. ಆರ್. ಶ್ರೀಕೃಷ್ಣ, ಶ್ರೀಮತಿ ಎಂ. ಬಿ. ಜಯಶ್ರೀ ಅರಸ್ ಮತ್ತು ಶ್ರೀ ಆರ್. ಬಾಬುರಾವ್ ಇವರುಗಳು ಉಪಾಧ್ಯಕ್ಷರು ಗಳಾಗಿಯೂ, ಶ್ರೀ ಎಂ. ಬಸವರಾಜೇಅರಸ್, ಸಭಾಪತಿಗಳಾಗಿಯೂ, ಶ್ರೀಮತಿ ಎಂ. ಕೆ. ಗೀತಾ, ಕಾರ್ಯದರ್ಶಿ ಯಾಗಿಯೂ, ಶ್ರೀಮತಿ ಸುಬ್ಬಲಕ್ಷಮ್ಮ, ಸಹಕಾರ್ಯದರ್ಶಿಯಾಗಿಯೂ ಮತ್ತು ಶ್ರೀ ಕೆ. ಮಹೇಶ್, ಜಂಟಿಕಾರ್ಯದರ್ಶಿ ಯಾಗಿಯೂ ಚುನಾಯಿತರಾದರು.

ದಿನಾಂಕ 5-6-96 ರಂದು ವಿಶ್ವಪರಿಸರ ದಿನಾಚರಣೆಯನ್ನು ಆಚರಿಸಲಾಯಿತು.

## Bangalore North District Association

### Information course for the Heads of the Institution in Bangalore North District High Schools and Junior Colleges

Information course for the Heads of the Institution in Bangalore North District High Schools and Junior College conducted on 29th June 1996 at Sindhi Hall, Bangalore - 1

Total Number of Participants were 168.

Mr. T. S. Lucas LT (S) was the leader of the course, ably assisted by Mr. Chinnaswamy Reddy LT (S), Mr. Narayana Shetty STC (S), LT (S), Mrs. Janaki Venugopal, LT (G), Mrs. Ravi Wesley, LT (G) and Mr. Shamasundar Sharma ADC (S) and principal of Sri Vani High School.

All the participants actually participated in the course. Mr. Chandrashekar DC (S) welcomed the participants.

Mrs. Vimal, DDPI of Bangalore North District was the Chief Guest for the valedictory function. State Chief Commissioner Sri Kondajji B. Shanmukhappa and State Secretary Prof Suryanarayanappa were the Guests of Honour for the Valedictory function. Smt. Susheela Gopal DC (G) welcomed the participants for the valedictory function and District Secretary Mr. V. Kulkarni proposed vote of tnanks.

---

### BECOME A SCOUT AND FOLLOW THE LAW

To Control : Tongue, Temper & Temptation
To Watch : Speech, Behaviour & Action
To Prevent : Laziness, Falsehood & slang

= A Scout/Guide is trust Warthy
– A Scout/Guide is Loyal

To Respect : Old age, Religion & Law
To Love : Purity, Honesty & Hard Work
To Admire : Beauty, Intellect & Character
To Cultivate : Courage, Cheerfulness & Contentment

= A Scout/Guide is a friend to all
= A Scout/Guide is Courteous
= A Scout/Guide is a friend to animals
= A Scout/Guide is Courageous
= A Scout/Guide is thrifty

Collection by : **Yemyaycee**

# We Greet Each Other

When people meet, they greet one another. There are a variety of ways in which people express their good wishes to one another. The commonest form of greeting in India is namaste, or namaskar.

In all forms of greeting, usually the palms are brought together, like a lotus bud : the significance is that greeting is from the heart, which the lotus bud-shape implies. The positioning of the hand has its own significance in vanakkam among Tamilians.

Prostrating before a person is another form of greeting. This form is reserved for obeisance to the Almighty. God-men also get such reverence from their followers.

The most common form of greeting in Western countries is a hearty hand-shake. This is popular in almost all European countries.

Salute is a form of greeting which is in vogue all over the world. In a salute, the right hand is briskly raised to the forehead with the open palm facing the person in front and the fingers touching the forehead. In the Army, while saluting the palm faces down and the soldier touches the peak of his cap with the index finger. According to the American army's code of ethics, a soldier must use the hand–salute, "at a distance of not more than 30 paces and not less than six paces" During the Independence Day parade and the Republic Day march-past we witness different types of salutes by the Army, the Navy and the Air Force personnel : We also see Dipping colours, lowering the raising of sword. Planes flying low, dipping or tilting their wings in salute. There is also the salutation with drum-beats, music and the firing of cannons. The top honour reserved for visiting dignitaries is the 21–gun salute. This form of salute is also in use when the head of the country dies and is laid to rest. Winston Churchill came out with a novel form of salute-the "V" sign. signifying victory. Cubs use this as indi–cative of alertness.

In the non-military, non-political, non-class, inter-denominational, Scout movement founded by Lord Baden-Powell, the Scouts salute with three fingers, while thumb and the little finger are kept folded. They take the oath as, "On my honour, I promise to do my best. To do my duty to God and my Country : To help others and to obey the Scout Law".

A scout handshake is with the left hand in contrast to the common practice, signifying that the greeting comes from the heart. It is open and free. No defence is thought of.

Ships also exchange salute on the high seas. When they pass one another on the billowing ocean, they salute by dipping the flag of their country flying on their mast.

In Asian countries like China and Japan, bowing is the mode of greeting. People almost bend double in this form of greeting. There is a kind of elegance in this manner of expressing one's respect for another. There is grace and poise involved.

Among Muslims, hugging is a well-known form of greeting as witnessed during their festive occasion like Id. Unmindful of position or power, the poor and the rich hug one another to express the strong ties of brotherhood, love and affection. Salaam is the commonest greeting among the people of the Islamic nations.

"Cold as an Eskimo's nose", is an expression. Exposed to minus two degrees temperature, the nose is the coldest part of an Eskimo. When an Eskimo meets another, they salute each other by rubbing noses, to signify the warmth of their greetings.

When a person puts out his tongue in front of another person it is generally considered offensive and insulting but in Tibet, the common form of salute is thrusting one's tongue out. This signifies that "There is no evil on the tongue", and the person's heart is pure like gold.

Among the Todas, the aborigineees of the Nilgiris, there is a form of salute which expresses one's supplication to the visitor. When an elderly person from a neighbouring place visits, the youngsters of the place he visits, especially the girls and women, kneel before him. He keeps his right foot on the head of the supplicant. This indicates complete submissiveness to the visitor.

**Collected by M. A. CHALLAIAH**
Head Quarters Commissioner
(Public Relations)

# ನೆನಪಿನಂಗಳದಿಂದ

## ಹಿಂದಿನ ಹಿರಿಯರನ್ನು ಕುರಿತ ಕೆಲವು ಕುರುಹುಗಳು

## ಅಕರ ವಯಸ್ಕನ—ಜ್ಞಾಪಕದ ತುಣುಕುಗಳು

ನನಗೆ ಸ್ಕೌಟು ಸಂಸ್ಥೆಯ ಪರಿಚಯವಾದದ್ದು — ಬೆಂಗಳೂರಿನಲ್ಲಿ. ಸುಮಾರು 1920ರಲ್ಲಿ. ನಾನು ವಾಗ್ದಾನವಿತ್ತು "ಕೋಮಲ ಪಾದದ" ಚಿಹ್ನೆಯನ್ನು ಹೊಂದಿದ್ದು 1927ರಲ್ಲಿ.

'ಸ್ಕೌಟ್' ಎಂದರೆ ಜ್ಞಾಪಕಕ್ಕೆ ಬರುವುದು "DRESS"—ಸಮವಸ್ತ್ರ. ಇದನ್ನು ಕುರಿತು ಇಂಗ್ಲಿಷ್‌ನಲ್ಲಿ ಶ್ರೀ ಆರ್. ಕೆ. ನಾರಾಯಣ್ ಅವರು ಒಂದು ಸಣ್ಣ ವ್ಯಾಸವನ್ನೇ ಬರೆದಿದ್ದಾರೆ. ಆಗ ಮೈಸೂರು ಸಂಸ್ಥಾನವಾಗಿದ್ದ ಕರ್ನಾಟಕದ ಭಾಗದಲ್ಲಿ ಯುವರಾಜ ಕಂಠೀರವ ನರಸಿಂಹರಾಜ ಒಡೆಯರ್ ಅವರು ಚೀಫ್ ಸ್ಕೌಟ್ (Chief Scout) ಆಗಿದ್ದರು. ಇವರಿಗೆ ನಮ್ಮ ಸಮವಸ್ತ್ರ ಬಹಳ ಆಕರ್ಷಕವಾಗಿ ಒಪ್ಪಿತ್ತು. ಅಂಗಸೌಷ್ಠವವೂ ಆಕಾರ ಸದೃಶತ್ವವೂ ಇವರಿಗಿತ್ತು. ಈ ಸಮವಸ್ತ್ರವನ್ನು ಧರಿಸಿ ಸಾರ್ವಜನಿಕ ಸ್ಕೌಟು ಕೂಟಗಳಲ್ಲಿ ಬಹು ಸಂತೋಷದಿಂದ ಭಾಗವಹಿಸುತ್ತಿದ್ದರು. ತಮ್ಮ ಸ್ಕೌಟುಗಳೆಂದರೆ—ಸಂಸ್ಥೆಯೆಂದರೆ ಅವರಿಗೆ ಬಹು ಪ್ರೀತಿ. ಪ್ರತಿ ವರ್ಷ ಹೊರ ದೇಶಗಳಿಗೆ ಸಂಚಾರ ಹೋಗುತ್ತಿದ್ದರು. ಹಾಗೆ ಹೋದಾಗಲೆಲ್ಲಾ ಇಂಗ್ಲೆಂಡಿನ ಸ್ಕೌಟು ಕೇಂದ್ರದಿಂದ, ನಮ್ಮ ಮೈಸೂರು ಸ್ಕೌಟು ಸಂಸ್ಥೆಗೆ, ಏನಾದರೊಂದು ಉಪಯುಕ್ತವಾದ ಸಲಕರಣೆಯನ್ನು ಕೊಂಡು ತರುತ್ತಿದ್ದರು—ಕ್ಯಾಮರಾ, ಬೈನಾಕ್ಯುಲರ್, ಕ್ಯಾಂಪಿಂಗ್‌ಗೆ ಅನುಕೂಲವಾಗಿದ್ದ ಹಸಿರು ಬಣ್ಣದ ಪೆಟ್ರೋಲ್ ಟೆಂಟ್‌ಗಳು, ಕ್ಯಾಂಪ್‌ಗೆ ಸ್ಕೌಟುಗಳು ತಮ್ಮ ಸಾಮಾನನ್ನು ಸಾಗಿಸಲು 'TREK CART' ಇತ್ಯಾದಿ. ನಾವು ಕೆಂಗೇರಿಯ ಬಳಿ ಕುಂಬಳಗೋಡಿನಲ್ಲಿ ಕ್ಯಾಂಪ್ ಹೋದಾಗ, ಈ 'TREK CART'ನಲ್ಲಿ ನಮ್ಮ ಸಾಮಾನುಗಳನ್ನು ಪೇರಿಸಿ, ಗಾಡಿ ಎಳೆದುಕೊಂಡು ಹೋದದ್ದು ನನಗೆ ಇನ್ನೂ ಜ್ಞಾಪಕ.

ಸಂಸ್ಥೆಯ ಧ್ಯೇಯಗಳನ್ನು, ಚೆನ್ನಾಗಿ ಅರಿತಿದ್ದ ಅವರು, ತಮ್ಮ ಪುತ್ರ ರಾಜಕುಮಾರ ಜಯಚಾಮರಾಜ ಒಡೆಯರ್ ಅವರಿಗೆ ಸರಿಯಾದ ಸ್ಕೌಟು ತರಬೇತಿಯನ್ನು ಏರ್ಪಡಿಸಿದ್ದರು. ರಾಜಕುಮಾರರ ಸ್ಕೌಟುದೀಕ್ಷೆಯನ್ನು ಮುಚ್ಚಿದ ಅರಮನೆಯ ವಾತಾವರಣದಲ್ಲಿಯೇ ನಡೆಸದೆ, ಎಲ್ಲರೂ ಮೆಚ್ಚುವಂತೆ ಸಾರ್ವಜನಿಕವಾಗಿ, (ಎಂದರೆ ಬೇರೆ ಎಲ್ಲರಂತೆ) ನಡೆಯುವಂತೆ ಏರ್ಪಡಿಸಿದ್ದರು. ಈ ದೃಶ್ಯವನ್ನು ಅಂದಿನ ವಿಶ್ವವಿದ್ಯಾನಿಲಯದ ಕುಲಪತಿ, ಋಷಿವರ್ಯ ಬ್ರಜೇಂದ್ರನಾಥ್ ಸೀಲ್‌ರವರು ಮನ ಹಿಗ್ಗಿಸಿ ನೋಡುತ್ತಿದ್ದ ಫೋಟೋವನ್ನು ಇದೀಗ ನೋಡಿದಂತಿದೆ.

ಬೊಂಬಾಯಿಯಲ್ಲಿ ಆಲ್ ಇಂಡಿಯಾ ಜಾಂಬೋರಿ ನಡೆಯಿತು. ಆಗ ಅಲ್ಲೇ ವಾಸ್ತವ್ಯ ಇದ್ದ ಯುವರಾಜರು 'ಶಿಬಿರಾಗ್ನಿ'ಗೆ ಹೋಗಿದ್ದರು. ಕೂಟದ ಅಂಚಿನಲ್ಲಿ ಇವರನ್ನು ಸ್ವಾಗತಿಸಿ, ಹಿರಿಯ ಸ್ಕೌಟುಗಳು, ಅಕ್ಕರೆಯಿಂದ, ಆಸೆಯಿಂದ, ಅನಾಮತ್ತಾಗಿ ಹಾಗೆಯೇ ಎತ್ತಿಕೊಂಡು ಹೋಗಿ ಶಿಬಿರಾಗ್ನಿಯ ಸಮೀಪ ಉಪಸ್ಥಿತರನ್ನಾಗಿಸಿದರು. ಯುವರಾಜರೂ ಈ ಜನಾದರಣೆಯನ್ನು ಬಹು ಸಂತೋಷದಿಂದ ಅನುಭವಿಸಿದರು.

ಕನ್ನಡವೆಂದರೆ ಯುವರಾಜರಿಗೆ ಬಹು ಪ್ರೀತಿ ಅಂದಿನ ದಿನಗಳಲ್ಲಿ ನಮ್ಮ ಹಾಡುಗಳೂ, ಕೂಗುಗಳೂ ಬಹುತೇಕ ಇಂಗ್ಲೀಷ್‌ನಲ್ಲೇ ಇದ್ದುವು. ಒಂದು ಸಲ ಮೈಸೂರು ಅರಮನೆಯಲ್ಲಿ ಸ್ಕೌಟು ಶಿಕ್ಷಣ ಪಡೆದಿದ್ದ ಕೆಲವು ಹುಡುಗರು,

"ರಾಗಿ ಮುದ್ದೆ ತಿಂದು ತಿಂದು" ಎನ್ನುವ ಗೀತೆಯನ್ನು ಸಂತೋಷವಾಗಿ ಅಭಿನಯಮಾಡುತ್ತಿದ್ದುದು, ಯುವರಾಜರ ಕಿವಿಗೆ ಬಿದ್ದು, ರಾಜಕುಮಾರ ಜಯಚಾಮರಾಜ ಒಡೆಯರ್ ಅವರು ಅವರನ್ನು ಕರೆದು, ಅದು ಏನೆಂದು ವಿವರವಾಗಿ ತಿಳಿಸಲು ಕೋರಿದರು. ರಾಜಕುಮಾರರೂ ಅದನ್ನು ಕಲಿತು

ರಾಗಿ ಮುದ್ದೆ-ರಾಗಿಮುದ್ದೆ ತಿಂದೂ ತಿಂದೂ ಗಟ್ಟಿಯಾಗಿ
ಪುಷ್ಟಿಯಾಗಿ ಇದ್ದೇವು, ಆದರೆ ಈಗ ಈಗ ಸಪ್ಪೆ ಅಕ್ಕಿ ಅನ್ನ ತಿಂದು ತಿಂದು
ಹೀನವಾಗಿ-ಕ್ಷೀಣವಾಗಿ ಹೋದೇವು. ಆದರೇ ಈಗ ಈಗ ಸ್ಕಾಟಿಂಗ್ ಸೇರಿ
ಕಾಡಿಗ್ಹೋಗಿ-ಕಸ್ರತ್ ಮಾಡಿ- ಭಲ್ ಭಲಾ ರುಸ್ತುಂ-ಉಫೇ

ಎನ್ನುವುದನ್ನು ಒಪ್ಪಿಸಿದರು-ತಂದೆಗೂ ತೃಪ್ತಿಯಾಯಿತು. (ಈ ಪ್ರಸಂಗವನ್ನು, ನನಗೆ ಈ ಪ್ರಸಿದ್ಧವಾದ ಕೂಗನ್ನು ರಚಿಸಿದ ಶ್ರೀ ವಿ. ಎಸ್. ರಾಮಚಂದ್ರರಾಯರೇ ಹೇಳಿದರು).

ನಂತರ 22-8-1931 ರಂದು ಬೆಂಗಳೂರು ಅರಮನೆಯಲ್ಲಿ ರಾಜಮನೆತನದ ಆತಿಥ್ಯದಲ್ಲಿ ಒಂದು ರ್‍ಯಾಲಿ ಏರ್ಪಾಡಾಗಿತ್ತು. ಆ ಆಕರ್ಷಣೀಯವಾದ ರ್‍ಯಾಲಿಯಲ್ಲಿ ಯುವರಾಜರೂ, ರಾಜಕುಮಾರ ಜಯಚಾಮರಾಜ ಒಡೆಯರ್ ಅವರೂ ಉಪಸ್ಥಿತರಾಗಿದ್ದರು. ಸ್ಕಾಟುಗಳು ಸುಶ್ರಾವ್ಯವಾಗಿ, ಸ್ಪಷ್ಟವಾಗಿ ಈ "ರಾಗಿ ಮುದ್ದೆ" ಗೀತೆಯನ್ನು ಅಭಿನಯಿಸಿದರು. ಕೂಡಿದ್ದ ಸಾವಿರಾರು ಮಂದಿ ಕೈ ತಟ್ಟಿದರು. ಯುವರಾಜರೂ, ರಾಜಕುಮಾರರೂ ಮನಃಪೂರ್ವಕವಾಗಿ ನಲಿದು ಆನಂದಪಟ್ಟರು.

ಈ ಅರಮನೆಯ ರ್‍ಯಾಲಿಯ ಮುಖ್ಯ ಪರಿಣಾಮವಾಗಿ, ಸಂಸ್ಥಾನದಲ್ಲಿ 'DEPUTY CHIEF SCOUT COMMISSIONER' ಹುದ್ದೆಯ ಸೃಷ್ಟಿಯಾಯಿತು.

1937 ರಲ್ಲಿ ಮೈಸೂರಿನ ಸ್ಕಾಟ್ ತಂಡ ದೆಹಲಿ ಜಾಂಬೋರಿಗೆ ಹೋಗುವ ಮಾರ್ಗದಲ್ಲಿ ಬೊಂಬಾಯಿಯಲ್ಲಿ ತಂಗಿತ್ತು. ಅಲ್ಲಿ ಬೋರಿಬಂದರಿನ ''ANCHORACE'' ಎನ್ನುವ ತಮ್ಮ ಸ್ವಂತ ಮಹಲಿನಲ್ಲಿ ತಂಗಿದ್ದ ಯುವರಾಜರು, ಮೈಸೂರು ಸ್ಕಾಟುಗಳು ಬೊಂಬಾಯಿಗೆ ಬಂದಿರುವುದನ್ನು ತಿಳಿದು, ತಮ್ಮ ಆಪ್ತ ಕಾರ್ಯದರ್ಶಿ ತಮ್ಮಯ್ಯನವರಿಗೆ ಹೇಳಿ, ಒಂದು TEA PARTYಯನ್ನು ಏರ್ಪಡಿಸಿ, ಎಲ್ಲಾ ಬಾಲಕರನ್ನೂ ಮಹಲಿಗೆ ಕರೆಸಿಕೊಂಡು ಸತ್ಕರಿಸಿದರು.

ಯುವರಾಜರ ನೆನಪು ಅಳಿಯಲಾಗದ್ದು.

ಟಿ. ರಾಜಯ್ಯಂಗಾರ್
4-7-96

(ಶ್ರೀ ಟಿ. ರಾಜಯ್ಯಂಗಾರ್‌ರವರು, ರಾಜ್ಯದ ಅತಿ ಹಳೆಯ ಮುಕ್ತದಳವಾದ ಮಲ್ಲೇಶ್ವರಂನ ಶ್ರೀ ಚಾಮುಂಡಿ ದಳದಲ್ಲಿ ಸ್ಕಾಟ್ ಆಗಿದ್ದವರು. ಮುಂದೆ ತಮಿಳುನಾಡಿನ ಕೊಯಮತ್ತೂರಿನಲ್ಲಿ ಸ॥ ಜಿಲ್ಲಾ ಆಯುಕ್ತರಾಗಿ, ಜಿಲ್ಲಾ ಕಾರ್ಯದರ್ಶಿಗಳೂ ಆಗಿದ್ದವರು. 80ರ ಹರೆಯದಲ್ಲೂ ಸ್ಕಾಟಿಂಗ್ ಬಗ್ಗೆ, ಕನ್ನಡದ ಬಗ್ಗೆ ಅಭಿಮಾನದಿಂದ ಸ್ಪಂದಿಸುವವರು. ಕೇಳಿದ ಕೂಡಲೇ ಒಪ್ಪಿ, ಲೇಖನವನ್ನು ಬರೆದುಕೊಟ್ಟ, ಕೊಡಲಿರುವ ಅವರಿಗೆ ಧನ್ಯವಾದಗಳು).

—ಸಂಪಾದಕ

# Tips to Unit Leaders

By : S. PAULRAJ, B.A., B.Ed.,
LT (S), DTC (S), K.G.F.

*(Contd. from Previous issue)*

**Songs :** Serious or humorous. old and new.

**Yells :** To "Blow off steam" for unity and morals.

**Story Telling :** By scouts, leaders and outsiders,

**Inspiration :** Various means of keeping the ideals of scouting before the boys in a natural manner.

**Ceremonies :** Opening and closing ceremonies, Investiture, All Faiths prayer, Advancement ceremonies, presentation of warrants, awards and Badges.

**Scout Oath and Law :** Occasional using of the Law and its Practice. Rededication to the scout oath at special outstanding events in the year's Programme.

**Scout Master's Minute :** A short inspirational incident told by the Leader.

**Administration :** Business matters will have to be dealt often but keep the time spent on them at a minimum.

**Reports :** By patro's on attandence, advancement, Uniform, Reading of the Troop Log by the Troop scribe.

**Dues :** Payment of Troop dues.

**Inspection :** Of uniform for neatness and correctness and proper wearing of the bades and insignia.

**Announcement :** Of forthcoming meetings, hikes, camps and so on. The foregoing salient features are to be practiced and followed. Of course these ingredients if followed, keep the life of the Troop happy and enjoyable both by the scouters and scouts.




11-7-1996 ರಂದು ಕೋಲಾರದಲ್ಲಿ ನಡೆದ ಸನ್ನದು ಮತ್ತು ಪ್ರಮಾಣಪತ್ರ ವಿತರಣಾ ಮಹೋತ್ಸವ ಸಂದರ್ಭದಲ್ಲಿ ವೇದಿಕೆಯ ಮೇಲೆ ಸ್ಕೌಟರ್ ಶ್ರೀ ಡಬ್ಲ್ಯೂ. ಎಸ್. ಕುಮಾರ್, ಹೆ|| ಕ್ವಾ|| ಕಮಿಸನರ್ ಶ್ರೀ ಎಸ್. ಪಾಲ್‌ರಾಜ್, ಜಿಲ್ಲಾ ಆಯುಕ್ತ (ಸ್ಕೌ) ಶ್ರೀ ಕೆ. ವಿ. ಶಂಕರಪ್ಪ, ಸಾ|| ಶಿ|| ಇಲಾಖಾ ಉಪನಿರ್ದೇಶಕ ಶ್ರೀ ಟಿ. ಎಂ. ಕುಮಾರ್, ಜಿಲ್ಲಾ ಪರಿಷತ್ ಉಪಾಧ್ಯಕ್ಷ ಶ್ರೀ ಮುಂಡಕಲ್ ವೆಂಕಟೇಶ್ ಹಾಗೂ ಜಿಲ್ಲಾ ಕೋಶಾಧಿಕಾರಿ ಶ್ರೀ ಬಸಪ್ಪ ಗೌಡ ಇವರುಗಳು ಉಪಸ್ಥಿತರಿರುವುದನ್ನು ಕಾಣಬಹುದು




11-7-1996 ರಂದು ಕೋಲಾರದಲ್ಲಿ ನಡೆದ ಸನ್ನದು ಮತ್ತು ಪ್ರಮಾಣಪತ್ರ ವಿತರಣಾ ಮಹೋತ್ಸವ ಸಂದರ್ಭದಲ್ಲಿ ಹೆ|| ಕಾ|| ಕಮಿಷನರ್ ಶ್ರೀ ಪಾಲ್‌ರಾಜ್, ಎಲ್.ಟಿ.ರವರು, ಕೋಲಾರ ಜಿಲ್ಲಾ ಆಯುಕ್ತ (ಸ್ಕೌ) ಶ್ರೀ ಕೆ. ವಿ. ಶಂಕರಪ್ಪ ಅವರನ್ನು ಸಭೆಗೆ ಸ್ವಾಗತಿಸುತ್ತಿರುವುದು. ಸಾರ್ವಜನಿಕ ಶಿಕ್ಷಣ ಇಲಾಖೆ ಉಪನಿರ್ದೇಶಕ ಶ್ರೀ ಟಿ. ಎಂ. ಕುಮಾರ್ ಅವರು ಉಪಸ್ಥಿತರಿರುವುದನ್ನೂ, ಸ್ಕೌಟರ್ ಶ್ರೀ ಡಬ್ಲ್ಯೂ. ಎಸ್. ಕುಮಾರ್ ಅವರು ಸ್ವಾಗತ ಬಯಸುವುದನ್ನೂ ಚಿತ್ರದಲ್ಲಿ ಕಾಣಬಹುದು.



ಗೈಡ್‌ಗಳ ಪದಕ ಕಮ್ಮಟ ಶಿಬಿರವು ರಾಯಚೂರಿನ ಸ್ಕೌಟ್ ಭವನ ಮತ್ತು ಹಾಷ್ಮಿಯಾ ಶಾಲೆಯ ಆವರಣಗಳಲ್ಲಿ ದಿನಾಂಕ 9-7-1996 ರಿಂದ 13-9-1996 ರ ವರೆಗೆ ನಡೆಯಿತು. ಶ್ರೀಮತಿ ಕ್ರಿಸ್ಟೀನಾ, ಗೈಡ್ ಕ್ಯಾಪ್ಟನ್‌ರವರು ಶಿಬಿರದ ನಾಯಕಿಯಾಗಿದ್ದರು.



**Published for the Bharat Scouts and Guides, Karnataka State Headquarters, Prof. P. Sivashankar Circle, Kondajji Basappa Road Fort, Bangalore-560 002, by the State Secretary and Printed by Sri B. Basavaiah, M.D. at S.J.M. Mudrana Pvt. Ltd. Bangalore-560 027 Phone : 2236469**

To,

THE BHARAT SCOUTS AND GUIDES
Prof. P. Sivashankar Circle
Kondajji Basappa Road
Fort, Bangalore-560 002